ಮನೋಹರ ಗ್ರಂಥಮಾಲೆಯ ೨೧ನೆಯ ಕುಸುಮ

೪ನೆಯ ವರುಷದ ೩ನೆಯ ಕುಸುಮ

# ಸೋಲೋ-ಗೆಲುವೋ

ಶ್ರೀ 'ದೇವುಡು'



ಡಿಸೆಂಬರ ೧೯೩೭ ]

[ ೧—೧೨—೦

ಸಂಪಾದಕರು :—

ಜಿ. ಬಿ. ಜೋಶಿ

ಜಿ. ವಿ. ಚುಳಕಿ

ಮುದ್ರಕರು :
ಶೇಷಗಿರಿರಾವ ಗೋವಿಂದರಾವ
ಕುಲಕರ್ಣಿ
ಸಾಧನ ಪ್ರೆಸ್, ಧಾರವಾಡ

ಪ್ರಕಾಶಕರು :
ಜಿ. ಬಿ. ಜೋಶಿ
ಮನೋಹರ ಗ್ರಂಥಮಾಲಾ,
ಧಾರವಾಡ

ಸಾಹಿತ್ಯ ವಿಷಯದಲ್ಲಿ ಸಲಹೆಗಾರರು :—

ಶ್ರೀ. ದ. ರಾ. ಬೇಂದ್ರೆ, ಎಂ. ಎ.

,, ರಂ. ಶ್ರೀ. ಮುಗಳಿ, ಎಂ. ಎ. ಬಿ. ಟಿ.

,, ವಿ. ಕೃ. ಗೋಕಾಕ, ಎಂ. ಎ. ( ಇಂಗ್ಲಂಡದಲ್ಲಿ )

# ನಮ್ಮ ಮಾತು

ನಮ್ಮ ಮಾಲೆಯ ನಾಲ್ಕನೆಯ ವರುಷದ ಮೂರನೆಯ ಪುಸ್ತಕವು ಈ "**ಸೋಲೋ-ಗೆಲುವೋ**". ಇದನ್ನು ಶ್ರೀ. ದೇವುಡು ನರಸಿಂಹಶಾಸ್ತ್ರಿ ಎಂ. ಎ. ಇವರು ಬರೆದಿದ್ದಾರೆ. ಇವರು ತಮ್ಮ ಹಲವು ಕೃತಿಗಳಿಂದ ಹೆಸರಾದ ಸಾಹಿತಿಗಳೆಂದು ಪ್ರಸಿದ್ಧಿ ಹೊಂದಿರುವರು. ಇಂಥವರ ಕೃತಿಯೊಂದನ್ನು ದೊರಕಿಸಿ ನಮ್ಮ ರಸಿಕವಾಚಕವೃಂದಕ್ಕೆ ಸಲ್ಲಿಸಬೇಕೆಂಬ ಬಹುದಿನದ ನಮ್ಮ ಪ್ರಯತ್ನವು ಈಗ ಸಫಲವಾಯಿತೆಂದು ಹಿಗ್ಗಿದ್ದೇವೆ. ತಮ್ಮ ಅನೇಕ ಕಾರ್ಯಕಲಾಪಗಳಲ್ಲಿ ಬಿಡುವು ದೊರಕಿಸಿಕೊಂಡು ಈ ಪುಸ್ತಕವನ್ನು ಕಡೆಗೊಮ್ಮೆ ಪೂರ್ತಿಯಾಗಿ ಬರೆದುಕೊಟ್ಟ ಶ್ರೀಮಾನ್ ದೇವುಡು ಅವರಿಗೆ ನಾವು ಅತ್ಯಂತ ಕೃತಜ್ಞರಾಗಿದ್ದೇವೆ.

ಮಾಲೆಯ ಬಿಡಿಮುತ್ತುಗಳಾಗಿ ಶ್ರೀಮಾನ್ ಗೋಕಾಕ ಇವರ "**ಪಯಣ**"ವೆಂಬ ಕವನ ಸಂಗ್ರಹವೂ-ಶ್ರೀಮಾನ್ ಮಾಸ್ತಿ ವೆಂಕಟೇಶ ಐಯ್ಯಂಗಾರ ಇವರ "**ತಿರುಪಾಣಿ**" ಎಂಬ ಸಂಗೀತ ಪ್ರಧಾನವಾದ ನಾಟಕವೂ ಬೇಗನೆ ಪ್ರಕಟವಾಗುವವು. ಕಾರಣ ಚಂದಾದಾರರು ಇತ್ತ ಗಮನಕೊಡುವರೆಂದು ಆಶಿಸುವೆವು. ಬಿಡಿ ಮುತ್ತುಗಳನ್ನು ಮುಕ್ಕಾಲು ಬೆಲೆಗೆ ಕೊಡುವೆವೆಂಬ ಮಾತನ್ನು ಚಂದಾದಾರರು ಮರೆತಿಲ್ಲವೆಂದು ಗ್ರಹಿಸಿದ್ದೇವೆ.

ಸಂಪಾದಕರು,

**ಮ. ಗ್ರ. ಮಾಲಾ, ಧಾರವಾಡ**

# ಪರಿವಿಡಿ

# ಮುನ್ನುಡಿ

'ಗ್ರಂಥಗಳಿಗೆ ಮುನ್ನುಡಿ ಏಕೆ?' ಎಂದು ನಾನು ಕೇಳಿದರೆ, ಗೆಳೆಯ ಜೋಂಧ್ಳೆಯವರು "ಏಕೆ ಇರಬಾರದು? ಓದುಗರಿಗೆ ಒಳಹುಗಾರರು ನನ್ನ ಗ್ರಂಥವನ್ನು ಈ ದೃಷ್ಟಿಯಿಂದ ನೋಡಿರೆಂದು ಹೇಳಿದರೆ ತಪ್ಪೇನು?" ಎಂದು ಪ್ರತಿಯಾಡಿ ನನ್ನ ಬಾಯಿ ಕಟ್ಟಿದರು. ಅದರಿಂದ ನನಗೆ ಮನಸ್ಸಿಲ್ಲದಿದ್ದರೂ ಈ ಎರಡು ಮಾತನಾಡುತ್ತಿದ್ದೇನೆ.

ಹಿಂದೆ ಅಂತರಂಗದ ಮುನ್ನುಡಿ ಬರೆಯುತ್ತಾ ಶ್ರೀಯುತ ಎಸ್. ಬಿ. ಶಾಸ್ತ್ರಿಗಳವರು "ಅಂತರಂಗವು ಪೂರ್ಣವಾಗಿದೆಯೇ?" ಎಂದು ಸಂಶಯ ಪಟ್ಟರು. ಈ ಸುಮಾರು ಮೂರು ವರ್ಷಗಳ ಮೇಲೆ, ಆ ಸಂಶಯವು ಸರಿ ಎನ್ನಿಸಿದೆ. "ನಜಾತು ಕಾಮಃ ಕಾಮೋನ ಉಪಭೋಗೇನ ಶಾಮ್ಯತಿ" ಎಂಬ ಯಯಾತಿ ವಾಕ್ಯವು ಎಂದೆಂದಿಗೂ ನಿಜವಾಗಿದ್ದರೂ ಆ ವಾಕ್ಯವು ನಿಜವೆಂದು ತಿಳಿದುಕೊಳ್ಳಲು ಅರ್ಥಕಾಮಗಳ ಪರಿಚಯವು ಬೇಕೇಬೇಕು. ಹಾಗಿಲ್ಲದೆ ದೊರೆಯದ ಹಣ್ಣು ಒಲ್ಲದ ದೇವರಿಗೆ ಎನ್ನುವ ಭಾವದಿಂದ ವೈರಾಗ್ಯವು ಬರದು. ದೊರೆತ ಭೋಗವನ್ನು ಕಾರಣಾಂತರಗಳಿಂದ ಬೇಡವೆಂದು ಭಟ್ಟನು ಬಿಟ್ಟರೂ ಅವನ ಬಗೆಯು ಮಾತ್ರ ಅದನ್ನು ಚಿಂತಿಸುತ್ತಿತ್ತಲ್ಲವೆ? ಎಂದು ತೋರಿ, ಅದೇ ಒಂದು ಅಪೂರ್ಣತೆಯೆನ್ನಿಸಿ, ಅದನ್ನು ವಿವೇಚಿಸಿ ಹುಡುಕಿ ನೋಡುವುದರಲ್ಲಿ ಮನಸ್ಸಿಗೆ ಕಾಣ ಬಂದ ಮೂರು ದೃಶ್ಯಗಳನ್ನು ಮೂರು ರೂಪಕಗಳನ್ನಾಗಿ ಬರೆದುಕೊಂಡಿದ್ದೇನೆ.

ಮೊದಲನೆಯದರಲ್ಲಿ ನಾಯಿಕಾನಾಯಕರು ತರುಣರು. ತಾರುಣ್ಯದ ಮೋಹಸಂಪತ್ತಿಯುಳ್ಳವರು. ಅವರು ವಿಮುಖರಾಗಿರುವುದು ಇಬ್ಬರೂ ಒಂದೆಡೆ ಸೇರುವವರೆಗೆ, ಅನಂತರ ಅವರು ಅಭಿಮುಖರಾಗದಿರುವುದು ಅಸಾಧ್ಯ. ಎಂಬ ಚಿತ್ರ. ಎರಡನೆಯದರಲ್ಲಿ ಹೆಣ್ಣು ಗಂಡುಗಳು ಸಂಸಾರಿಗಳು. ಒಂದು ಮಗುವೂ ಆಗಿದೆ. ಆದರೂ ವಿಮುಖರು. ಅವರಿಗೆ ಪರಸ್ಪರ ಹೃದಯದ ಪರಿಚಯವಾಗಿಲ್ಲ, ಅದಕ್ಕೆ ಅವಕಾಶವು ದೊರೆಯಿತು.

ಹೃದಯಗಳೆರಡೂ ಸೇರಿದುವು. ಅದಕ್ಕೆ ಮುಂಚೆ ಹೆಣ್ಣಿನ ಕಣ್ಣಿಗೆ ಪ್ರಪಂಚವು ಒಂದು ಬಗೆಯಾಗಿ ಕಾಣುತ್ತಿತ್ತು: ಆ ಮೇಲೆ ಇನ್ನೊಂದು ಬಗೆಯಾಗಿ ಕಂಡಿತು ಎಂಬ ಚಿತ್ರ. ಮೂರನೆಯದರಲ್ಲಿ ನಾಯಿಕಾನಾಯಕರು ಒಬ್ಬರ ನ್ನೊಬ್ಬರು ಬಲ್ಲವರು. ಹೆಣ್ಣು ಆತ್ಮಾರ್ಪಣ ಮಾಡಿದೆ, ಗಂಡೂ ಆತ್ಮಾರ್ಪ ಣಕ್ಕೆ ಇನ್ನೂ ಸಿದ್ಧವಾಗಿಲ್ಲ. "ನೀನೂ ಬೇಕು ಎಂಬ ಘಟ್ಟದಲ್ಲಿದ್ದೇನೆ. ನೀನಾದರೆ ಸಾಕು ಎಂಬ ಘಟ್ಟಕ್ಕೆ ಇನ್ನೂ ಬಂದಿಲ್ಲ" ಎಂಬ ಸ್ಥಿತಿ. ಅದನ್ನು ಮುಂದಿನ ಘಟನೆಯು ಮಾರ್ಪಡಿಸಿ, ಹಣ್ಣುಮಾಡಿ, ಹೆಣ್ಣಿಗೊಪ್ಪಿಸಿದೆ. ಮೊದಲು ಕಳ್ಳನಾಗಿ 'ನಿನ್ನ ದಾಸ' ಎಂದು ಬರೆದವನು ಕೊನೆಗೆ ನಿಜ ವಾಗಿಯೂ ದಾಸನಾಗುತ್ತಾನೆ. ಎಂಬುದು ಮೂರನೆಯದರಲ್ಲಿರುವ ಚಿತ್ರ.

ಕನ್ನಡ ಸಾಹಿತ್ಯವು ಹೊಸಹಾದಿಗಳನ್ನು ತುಳಿದು ಹೊಸರೂಪ ಗಳಿಂದ ಹೊಸತಾಗಿ ವಿರಾಜಿಸಬೇಕು ಎಂದು ಹಂಬಲಿಸುವರಲ್ಲಿ ನಾನೂ ಒಬ್ಬ. ಈ ಕಥೆಗಳಲ್ಲಿ ಹೊಸತನವಿರಬಹುದು ಎಂದುಕೊಂಡಿದ್ದೇನೆ. ಅಥವಾ ಈ ರೀತಿಯು ನನ್ನ ಮನಸ್ಸಿಗೆ ಹೊಸತಾಗಿ ಬಂದಿತು ಎನ್ನುವುದು ಇನ್ನೂ ಸರಿಯಿರಬಹುದು. ಈ ಜಾತಿಯ ಪ್ರಶ್ನೆಯು ಮನಸ್ಸಿಗೆ ಬರುವುದಕ್ಕೆ ಕಾರಣರಾದ ಗೆಳೆಯರುಂಟು. ಅವರನ್ನು ಸ್ಮರಿಸದಿದ್ದರೆ ನಾನು ದ್ರೋಹಿ ಯಾದೇನೆಂದು ಅವರನ್ನೂ ಸ್ಮರಿಸಿ, ಕೃತಜ್ಞತೆಯ ಕಾಣಿಕೆಯೊಪ್ಪಿಸುತ್ತೇನೆ.

ಮನೋಹರ ಗ್ರಂಥ ಮಾಲೆಗೆ ನಾನೂ ಒಂದು ಗ್ರಂಥವನ್ನು ಬರೆಯ ಬೇಕೆಂದು ಮಾಲೆಯ ಸಂಪಾದಕರು ಸೂಚಿಸಿ ವರ್ಷಾಂತರಗಳಾಯಿತು. ಶ್ರೀಯುತ ಬೇಂದ್ರೆಯವರ "ಆಗ್ರಹ"ವು ಆಗ್ರಹವೇ ಆದೀತೆಂದು ಹೆದರಿದಾಗ ಈ ಪುಸ್ತಕವು ಸಿದ್ಧವಾಯಿತು. ಹೀಗೆ, ಒತ್ತಿ ಒತ್ತಿ ನನ್ನಿಂದ ಸೇವೆಯನ್ನು ತೆಗೆದುಕೊಂಡ ಮನೋಹರ ಗ್ರಂಥ ಮಾಲೆಯವರಿಗೆ ನಾನು ಚಿರಕೃತಜ್ಞನಾಗಿದ್ದೇನೆ. ಈ ಗ್ರಂಥದಿಂದ ರಸಿಕರೂ ರಸಜ್ಞರೂ ಕಿಂಚಿತ್ತಾ ದರೂ ಸಂತೋಷ ಪಟ್ಟರೆ, ಆ ಭಾಗ್ಯವು ಸಂಪೂರ್ಣವಾಗಿ ಅವರಿಗೇ ಸೇರಬೇಕಾದುದು.

**'ದೇವುಡು'**

## ಶ್ರೀಯುತ ಎಸ್. ಜಿ. ಶಾಸ್ತ್ರಿಗಳು

ಎಮ್. ಎಸ್. ಸಿ. (ಲಂಡನ್)

ನನಗೆ ಕನ್ನಡ ಸಾಹಿತಿಗಳ ಪಂಕ್ತಿಯಲ್ಲಿ ಒಂದು ಸ್ಥಾನವನ್ನು
ಸಂಪಾದಿಸಿಕೊಟ್ಟು ಸತ್ಕರಿಸಿದ ಮಹನೀಯರು. ಅವರು,
ಕೈಹಿಡಿದು "ವಿಚಾರಣೆ" ಯನ್ನು ಬರೆಯಿಸಿ, ಅದನ್ನು
ಶ್ರೇಷ್ಠ ಜ್ಯೇಷ್ಠ ಸಾಹಿತಿಗಳ ಗಮನಕ್ಕೆ ತಂದು
ಪ್ರತ್ಯಕ್ಷ ಪರೋಕ್ಷಗಳಲ್ಲಿ ಸಹಾಯವಾಗಿ
ನನ್ನನ್ನೂ ಒಬ್ಬ "ಮನುಷ್ಯ"ನನ್ನಾಗಿ
ಮಾಡಿದವರು. ಅಂತಹ ಮಹನೀಯರ
ಸನ್ನಿಧಿಗೆ ಈ ಸಣ್ಣ ಕೃತಿಯನ್ನು
ಒಪ್ಪಿಸಿದ್ದೇನೆ. ಇದು ಅವರಿಂದ
ಆದ ಉಪಕಾರದ ಗುರುತಲ್ಲ.
ಆ ಮಹೋಪಕೃತಿಯನ್ನು ನೆನೆದ ಬಡವನ
ಸಣ್ಣ ಹೃದಯದ ಪುಟ್ಟ ಕಾಣಿಕೆ.

ಧಾತು ಸಂ। ಮಾರ್ಗಶಿರ
ಹುಣ್ಣಿಮೆ
ಧಾರವಾಡ

**ದೇವುಡು**

## ಮಾಲೆಯ ಮುಂದಿನ ಕುಸುಮ

ಮನೋಹರ ಗ್ರಂಥಮಾಲೆಯ ೨೨ನೆಯ
ಕುಸುಮ

# “ಮಾನಸ ಪುತ್ರ”

ರಸಭರಿತವಾದ, ವಿಚಾರ ಪರಿಪ್ಲುತವಾದ
ಕಾದಂಬರಿ

ಬರೆದವರು :

**ಶ್ರೀ. ದ. ರಾ. ಬೇಂದ್ರೆ,** ಎಮ್. ಎ.

# ಸೋಲೋ ಗೆಲುವೋ

## ೧

### ರಂಗರಾಯ

ರಂಗರಾಯನು ಸೋಫಾದಲ್ಲಿ ಕುಳಿತಿದ್ದನು. ಮುಖದಲ್ಲಿ ಗಂಭೀರಭಾವವು ಭದ್ರವಾಗಿ ಕುಳಿತಿತ್ತು. ಅವನ ಮುಂಗಡೆಯಲ್ಲಿ ಒಂದು ಸಣ್ಣ ಮೇಜು. ಅದರ ಮೇಲೆ ಕಾಗದ ಮೊದಲಾದ ಬರೆಯುವ ಸಾಧನ ಗಳು. ಆಗ ತಾನೇ ಒಂದು ಕಾಗದವನ್ನು ಬರೆದು ಮುಗಿಸಿಟ್ಟಿದ್ದನು. ಆ ದೇಹ, ತಾರುಣ್ಯ, ಇವುಗಳನ್ನು ನೋಡಿದರೆ ಅಷ್ಟಕ್ಕೇ ಆಯಾಸವಾಗ ಬೇಕಿಲ್ಲ; ಆದರೂ ಅವನಿಗೆ ಆಯಾಸವಾಗಿದೆ. ಹೃದಯದಲ್ಲಿದ್ದ ಆಲೋ ಚನೆಯು ಬದಲಾಯಿಸಿತೋ ಏನೋ ಮುಖದ ಭಾವವೂ ಬದಲಿಸಿತು. ದೇಹದಲ್ಲಿದ್ದ ನಾಡಿ ಬಿಗುಹು ಸಡಲಿ ತಲೆಯು ವಾಲಿ, ರಂಗರಾಯನು ಹಾಗೆಯೇ ಹಿಂದಕ್ಕೆ ಒರಗಿದನು. ಅವನಿಗೆ ಬೇಡವಾಗಿದ್ದರೂ ಒಂದು ಝೊಂಪು ಹತ್ತಿತು. ಅದು ಸುಮಾರು ಐದು ನಿಮಿಷವಿರಬಹುದು. ಅಷ್ಟರೊಳಗಾಗಿ ಒಂದು ಕನಸು.

ಕನಸಿನಲ್ಲಿ ಭಾರತವು ಬದಲಾವಣೆಯಾಗಿ ಹೋಗಿದೆ. ಭಾರತದಲ್ಲೆಲ್ಲಾ ಅಸ್ಪೃಶ್ಯರ ಕೂಗು ಬಲವಾಗಿದೆ. ಸನಾತನಿಗಳ ಅಭಿಮಾನವು ಇನ್ನೂ ಬಲ ವಾಗಿದೆ. ಇಬ್ಬರಿಗೂ ಯುದ್ಧವಾಗುವಷ್ಟು ಭಯಂಕರವಾದ ಸನ್ನಿವೇಶ. ಅಸ್ಪೃಶ್ಯರು ಯುದ್ಧದ ಭೇರಿಯನ್ನು ತಾಡಿಸುವುದಕ್ಕೆ ಹೊರಟು ಒಬ್ಬ ನನ್ನು ರಾಯಭಾರಿಯನ್ನಾಗಿ ಕಳುಹಿಸಿದ್ದಾರೆ. ಅವನು ಸನಾತನಿಗಳ

ಬಿಡಾರಕ್ಕೆ ಬಂದಿದ್ದಾನೆ. ಬಾಗಿಲಿನವನು ಅವನನ್ನು ಒಳಕ್ಕೆ ಬಿಡುವುದಿಲ್ಲ ವೆನ್ನುತ್ತಿರುವಾಗ ತಾನು ಅಲ್ಲಿಗೆ ಹೋಗಿ, ಸಮಾಧಾನ ಹೇಳಿ ಅವನನ್ನು ಒಳಕ್ಕೆ ಕರೆದುಕೊಂಡು ಹೋಗಿದ್ದಾನೆ. ಬಹಳ ಹೊತ್ತು ಮಾತುಕತೆ ಗಳಾಗಿವೆ. ಕೊನೆಗೆ ಸನಾತನಿಗಳು "ನಮಗೆ ಧರ್ಮ ದೊಡ್ಡದು. ನೀವು ಪ್ರಾಯಶ್ಚಿತ್ತ ಮಾಡಿಕೊಳ್ಳಿ. ಅನಂತರ ನಿಮ್ಮನ್ನು ಶೂದ್ರರಂತೆ ಭಾವಿಸು ತ್ತೇವೆ" ಎಂದು ಒಪ್ಪಿಕೊಳ್ಳುತ್ತಾರೆ. ರಾಯಭಾರಿಯು ಮೊದಮೊದಲು ಒಪ್ಪದವನು ಕೊನೆಗೆ ಒಪ್ಪಿಕೊಳ್ಳುತ್ತಾನೆ. ಇಬ್ಬರಿಗೂ ಒಪ್ಪಂದದ ಪತ್ರ ವಾಗುತ್ತದೆ. "ಅಸ್ಪೃಶ್ಯರು ಅವರವರ ಮನೋನುಗುಣವಾಗಿ ಶೈವರೋ ವೈಷ್ಣವರೋ ಆಗಬಹುದು. ಅವರಿಗೆ ಇದುವರೆಗೆ ಇದ್ದ ನಿರ್ಬಂಧಗಳನ್ನೆಲ್ಲ ತೆಗೆದುಹಾಕಲು ಸನಾತನಿಗಳು ಬದ್ಧರು." ಎಂದು ರಂಗರಾಯನೇ ಪತ್ರ ವನ್ನು ಬರೆದು ಇಡುತ್ತಾನೆ. ರಾಯಭಾರಿಯು ರುಜು ಹಾಕುತ್ತಾನೆ. ಸನಾ ತನಿಗಳ ಕಡೆಯೂ ಒಬ್ಬರು ಮುಂದೆ ಬಂದು ರುಜು ಹಾಕುತ್ತಾರೆ. ಚಿಕ್ಕಾಲಂ ಹಾಕುವುದಕ್ಕೆ ರಂಗರಾಯನು ಆ ಪತ್ರವನ್ನು ತೆಗೆದುಕೊಂಡು ನೋಡು ತ್ತಾನೆ. ರಾಯಭಾರಿಯು ಎಂ. ಕೆ. ಗಾಂಧೀ ಎಂದು ರುಜು ಮಾಡಿದ್ದಾನೆ. ಸನಾತನಿಗಳ ಪರವಾಗಿ ರುಜು ಮಾಡಿರುವುದು ಓದುವುದಕ್ಕೆ ಅಕ್ಷರಗಳೆಲ್ಲ ಕಲಿಸಿಕೊಂಡು ಹೋಗುತ್ತವೆ. ಓದುವುದಕ್ಕೆ ಆಗುವುದಿಲ್ಲ. ಆದರೂ ಮನಸ್ಸು ಅದನ್ನು ತಿಳಿದುಕೊಂಡು "ಹಾಗಾದರೆ ತಾವೇ ಶಂಕರರು" ಎಂದು ಕೇಳುತ್ತಾನೆ. "ಹೌದು. ಮಹಾತ್ಮರಿಗೆ ಈ ಧೈರ್ಯ?" ಎಂದು ರುಜು ಮಾಡಿದವರು ಹೇಳುತ್ತಾರೆ. ಗಾಂಧಿಯು ಮೈತುಂಬ ಬಟ್ಟೆ ಹಾಕಿ ಕೊಂಡು ಕುಳಿತಿದ್ದಂತೆ ಇದೆ. ಸನಾತನಿ ಶಂಕರನು ಗಾಂಧಿಯಂತ ಹೆಚ್ಚಾಗಿ ಏಕ ವಸ್ತ್ರಧಾರಿಯಾಗಿ ಕುಳಿತಿದ್ದಾನೆ.

ಮತ್ತೆ ಸ್ವಪ್ನವೃತ್ತಿಯು ಬಲಿತು, "ತಾವಿಬ್ಬರೂ ಇಲ್ಲಿಯೇ ಇದ್ದಿರಾ?" ಎಂದು ರಾಯನು ಕೇಳುತ್ತಾನೆ. ಅದಕ್ಕೆ ಇಬ್ಬರೂ "ನಾವು ಒಂದು ಕಡೆ ಮಾತ್ರ ಇರುವುದಕ್ಕೆ ಕಷ್ಟಿಣದ ತುಂಡೇ! ನಾವು ಈ ಜಗತ್ತಿ ನಲ್ಲಿ ಎಲ್ಲೆಲ್ಲೂ ಇರಬೇಕು. ಇಷ್ಟು ದಿನವೂ ರಷ್ಯಾ, ಚೈನಾ, ಗಳಲ್ಲಿ

ಬೇಕಾದಷ್ಟು ಕೆಲಸವಿತ್ತು. ರಷ್ಯದಲ್ಲಿ ಮುಗಿಸಿಕೊಂಡು ಚೈನಾದಲ್ಲಿ ಇದ್ದೆವು. ಇಲ್ಲಿ ಗಲಾಟೆಯಾಯಿತು. ಈಗ ಇಲ್ಲಿಗೆ ಬಂದಿದ್ದೇವೆ. ನೋಡು ಮುಂದಕ್ಕೆ ಹೊರಟೆವು" ಎನ್ನುತ್ತಾರೆ. ಮತ್ತೆ ಆ ದೇಹಗಳು ಗಾಳಿ ಯಲ್ಲಿ ಕರಗಿ ಹೋದಂತಾಗಿ, ಅವರು ಅದೃಶ್ಯರಾಗುತ್ತಾರೆ.

ರಂಗರಾಯನಿಗೆ ಮುಂದಿನ ಕನಸು ಸಾಗಲಿಲ್ಲ. ಆ ಇಬ್ಬರನ್ನೂ ಇನ್ನೂ ಒಂದು ಗಳಿಗೆ ನಿಲ್ಲಿಸಿಕೊಂಡು ಮಾತನಾಡಬೇಕೆಂದು ಅವನ ಆಸೆ. ಆದರೆ ಕನಸು ನಿಲ್ಲಲಿಲ್ಲ, ಒಡೆಯಿತು. ರಂಗರಾಯರಿಗೆ ಇಷ್ಟವಿಲ್ಲದಿದ್ದರೂ ಎಚ್ಚರವಾಗಿ ಹೋಯಿತು. ಕಣ್ಣು ತಾನಾಗಿ ಬಿಟ್ಟಿದೆ, ಚೆನ್ನಾಗಿ ಎಚ್ಚರ ವಾಯಿತು.

ರಂಗರಾಯನು ಒಬ್ಬ ಕುಳಿತನು. ಅವನು ಆಗರ್ಭ ಶ್ರೀಮಂತ. ಲೋಕದಲ್ಲಿ ಸುತ್ತುಮುತ್ತು ನಡೆಯುವ ವ್ಯಾಪಾರಗಳಲ್ಲಿ ಭಾಗ ವಹಿಸಿದರೆ ತನ್ನ ಶ್ರೀಮಂತಿಕೆಗೆ ಲೋಪವೆಂಬೂ ತನ್ನ ಮರ್ಯಾದೆ ಕೆಟ್ಟೀತೆಂದೂ ಹೆದರಿ ದೂರದಲ್ಲಿ ತನ್ನ ಪಾಡಿಗೆ ತಾನಿದ್ದವನು. ಅವನಿಗೆ ಇವ್ವೊತ್ತು ಸನಾ ತನಿಗಳೆಂಬ ಹಿಮವತ್ಪರ್ವತವು ಒಡ್ಡು ಬಂದು ಅಸ್ಪೃಶ್ಯತೆಯ ಹಿಂದೂ ಸಾಗರದಲ್ಲಿ ಬಿದ್ದು ಕರಗಿ ಹೋದರೂ ಚಿಂತೆಯಿಲ್ಲ. ತನಗೆ ಬರಬೇಕಾದ ಆದಾಯವು ಇರ್ವಿನ್ ಕೆನಾಲಿನಲ್ಲಿ ಕೊಚ್ಚಿ ಬಂದರೂ ಚಿಂತೆಯಿಲ್ಲ. ನೈತ ರಾಣೀ ನದಿಯಲ್ಲಿ ಬಿದ್ದು ರಕ್ತಪೂರ್ಣವಾಗಿ ದುರ್ಗಂಧ ಘೋಷಿಸುತ್ತವಾಗಿ ಬಂದರೂ ಚಿಂತೆಯಿಲ್ಲ. ಅಷ್ಟೇನು? "ತಮ್ಮ ಆಸ್ತಿಯೆಂಬ ಧೇನುವು, ಹಿಂಡಿದಾಗ ಹಾಲು ಕೊಟ್ಟರೆ ಒಳ್ಳೆಯದು. ಒಂದು ವೇಳೆ ಕೆಚ್ಚಲಿನಲ್ಲಿ ಹಾಲಿಲ್ಲದೆ ಹಿಂಡಿದವನ ಸಾಮರ್ಥ್ಯದ ಹೆಚ್ಚಾಗಿ ರಕ್ತವೇ ಬಂದರೂ ಚಿಂತೆ ಯಿಲ್ಲ. ಅಂತೂ ಪಾತ್ರೆಯು ತುಂಬಿದರೆ ಸರಿ." ಎಂಬ ಭಾವನೆಯು ಶ್ರೀಮಂತರ ವರ್ಗದವನು ರಾಯ.

ಅವನಿಗೆ ಯಾವ 'ಪಾರ್ಟಿ'ಯೂ ಕೂಡದು. ಇಂಟರ್ ನೇಷನಲ್ ಎಂದುಕೊಂಡು ನೇಷನಲ್ ಮರೆತಿದ್ದ ಪುಣ್ಯಾತ್ಮನವನು. ಅವನಿಗೆ ಈ ಕನಸಾದುದು ಆಶ್ಚರ್ಯವಾಯಿತು. "ಈ ಕನಸಾಗುವುದಕ್ಕೆ ಕಾರಣ

ವೇನು ?" ಎನ್ನಿಸಿ ಆಶ್ಚರ್ಯವು ಇನ್ನೂ ಬಲಿಯಿತು. ಬ್ಯಾಂಕಿಗೆ ಬರೆದಿದ್ದ ಕಾಗದದಲ್ಲಿ ಆಸ್ತಿಯನ್ನು ಹಂಚುವ ಯೋಚನೆ ಮಾಡಿದ್ದನು. ಅದರಿಂದ ಇಲ್ಲಿ ಈ ಲೀಲಾದೇವಿಯ ಕನಸು ಬಿದ್ದಿರಬಹುದು ಎಂದು ಸಮಾಧಾನ ಮಾಡಿಕೊಳ್ಳಲು ಯತ್ನಿಸಿದನು. ಇನ್ನೂ ಉಳಿದಿದ್ದ ಸಂಶಯವು "ಮೂರು ದುರ್ಗ"ದ ಸಿಗರೇಟಿನ ಹೊಗೆಯೊಡನೆ ಹೊಗೆಯಾಗಿ ಆಕಾಶಕ್ಕೆ ಹಾರಿಹೋಯಿತು.

ಬರೆದಿದ್ದ ಕಾಗದವನ್ನು ಇನ್ನೂ ಒಮ್ಮೆ ಓದಿದನು. "ಸರಿ. ಅಮ್ಮನಿಗೆ ತಿಂಗಳಿಗೆ ಮೂವತ್ತು ರೂಪಾಯಿ. ಅವಳಿಗೆ ಐವತ್ತು ರೂಪಾಯಿ, ಮನೆ, ಇದಿಷ್ಟು. ಇನ್ನು ಮುಂದಿನ ಮಾತು ನೋಡಿಕೊಳ್ಳೋಣ" ಎಂದು ಇತ್ಯರ್ಥ ಮಾಡುವ ವೇಳೆಗೆ ಒಂದು ಸಿಗರೇಟು ಪೂರ್ತಿಯಾಯಿತು. ಆ ಧೂಮವು ತೆರೆಯಲ್ಪಟ್ಟಿದ್ದ ಕಿಟಕಿಯಿಂದ ತೂರಿ ಹೊರಕ್ಕೆ ಹೊರಟು ಹೋಗಿದ್ದರೂ, ಅದರ ಭವ್ಯಾಮೋದವು ಮಾತ್ರ ಆ ವಿಶಾಲವಾದ ಕೊಠಡಿಯನ್ನೆಲ್ಲ ವ್ಯಾಪಿಸಿತ್ತು.

ರಾಯನ ಕೈಯ್ಯು ತಟ್ಟನೆ "ಕೂಗುವ ಗಂಟೆ"ಯ ಕಡೆಗೆ ಹೋಯಿತು. ಆದರೆ ಅದು ಅಷ್ಟೇ ಹಠಾತ್ತಾಗಿ ನಿಂತು "ಇಲ್ಲಿಗೆ ಅವಳನ್ನು ಕರೆಯಿಸುವದೆ ?" ಎನ್ನಿಸಿತು. "ಅದಕ್ಕೇನಂತೆ ?" ಎಂದು ಸಮಾಧಾನ. "ಇದುವರೆಗೆ ಇಲ್ಲ ?" ಎಂದು ಮತ್ತೆ ಪ್ರಶ್ನೆ. ಕೊನೆಗೆ ತಾನೇ ಹೋಗುವುದು. ಆಕೆಗೆ ಎಲ್ಲವನ್ನೂ ಓದಿ ಹೇಳುವುದು. ಹಾಗೆಂದ ಹಾಗೇ "ಡ್ರೈವ್ ಆನ ಬಾಲ್ಸ ಹಾಗೆ" ಸರ್ರೆಂದು ಹೊರಟು ಹೋಗುವುದು. ಎಂದುಕೊಂಡು ಹೊರಟನು. ರಾಯನು 'ಮಾಡರ್ನಿಸಂ' ಭಕ್ತ. ಬೇಕಾಗಿರಲಿ, ಬೇಡವಾಗಿರಲಿ, ಮೂರು ಹೊತ್ತು ಷರಾಯಿ ಬೂಟ್ಸು ಹಾಕಿಕೊಂಡೇ ಇರಬೇಕು ಎನ್ನುವವನು. ಹಾಗೆಯೇ ನೇರವಾಗಿ 'ಅಮ್ಮ'ನನ್ನು ಹುಡುಕಿಕೊಂಡು ಹೊರಟನು.

ಬೆಳಿಗ್ಗೆ ಸುಮಾರು ೯ ಘಂಟೆ. ಅಮ್ಮನು ಆಗ ತಾನೇ ಜಪವನ್ನು ಮುಗಿಸಿಕೊಂಡು ಬಂದು ಕುಳಿತಿದ್ದಾಳೆ. ಅಡುಗೆಯವಳು ಬಂದು ಅಡುಗೆ

ಯಲ್ಲ ಆಗಿದೆಯೆಂದು ವರದಿಯನ್ನು ಹೇಳುತ್ತಿದ್ದಾಳೆ. ರಾಯನು ಬಂದನು. ಅಡುಗೆಯವಳು ಮಾತು ನಿಲ್ಲಿಸಿದಳು. ರಾಯನ ಮುಖದಲ್ಲಿ ಹೊಸತನವು ಕಂಡುಬಂದಿತು. ಎಂದಿನ ಮರ್ಯಾದೆಯಿಂದ ಅಮ್ಮನೊಡನೆ ಮಾತನಾಡುವುದಕ್ಕೆ ಬಂದಂತಿತ್ತು. ಬಂದವನೇ “ಅಮ್ಮಾ! ನಿನ್ನೆಯ ದಿನ ನನ್ನನ್ನು ಬಾಯ್ಗೆ ಬಂದ ಹಾಗೆ ಅಂದುಬಿಟ್ಟೆ. ಇದೋ, ಇವತ್ತು ಎಲ್ಲವನ್ನೂ ಸರಿ ಮಾಡಿ ಬಿಟ್ಟಿದ್ದೇನೆ. ನಿನಗೆ ತಿಂಗಳಿಗೆ ಮೂವತ್ತು ರೂಪಾಯಿ ನೀನೆಲ್ಲಿದ್ದರೂ ಬಂದು ಬಿಡುತ್ತದೆ. ಅವಳಿಗೆ ಮನೆಯೊಂದು, ಖರ್ಚಿಗೆ ತಿಂಗಳಿಗೆ ಐವತ್ತು ರೂಪಾಯಿ. ಹೀಗೆ ನಡೆಯಬೇಕೆಂದು ಬ್ಯಾಂಕಿಗೆ ಬರೆದು ಬಿಟ್ಟಿದ್ದೇನೆ. ಇನ್ನಾದರೂ ನನ್ನ ಪಾಡಿಗೆ ನಾನು ನನಗೆ ತೋರಿದ ಹಾಗೆ ಇರಬಹುದಲ್ಲ?” ಎಂದನು.

ಅಮ್ಮನು ಅಡುಗೆಯವಳ ಮುಖವನ್ನು ನೋಡಿದಳು. ಗಡಿಗೆಯಂತಾಗಿದ್ದ ಮುಖವನ್ನು ನೋಡಿ ಅವಳು ಹೊರಟುಹೋದಳು. ಅಮ್ಮನ ತುಟಿಯೂ ಪಿಟಪಿಟ ಎಂದಿತು. ಮಾತು ಈಚೆಗೆ ಬರುವುದರೊಳಗಾಗಿ ಹಾಗೆಯೇ ನುಂಗಿಕೊಂಡಳು. ಕಣ್ಣು ರೆಪ್ಪೆಯನ್ನೂ ಹೊಡೆಯದೆ ಹಾಗೇ ನಿಂತಿತ್ತು.

ರಾಯನಿಗೆ ಆ ಮೌನದಲ್ಲಿ ಅದೇಕೋ ಎದೆಯು ನಡುಗಿತು. ಆದರೂ ಮತ್ತೆ ಎದೆ ಗಟ್ಟಿಮಾಡಿ “ತಿಳಿತೇನಮ್ಮ? ಇನ್ನಾದರೂ ನನ್ನ ಹುಚ್ಚಿಗೆ ಅಡ್ಡ ಬರಬೇಡ” ಎಂದನು. ಅದಷ್ಟರಲ್ಲಿ ಧೈರ್ಯವು ಕೆಟ್ಟಿತು. ಥರ್ಮಾಮೀಟರ್ ೯೮ ರಿಂದ ೭೫ಕ್ಕೆ ಇಳಿದರೆ ಆಗುವ ಹಾಗೆ ಆಗಿ ಅವನಿಗೇಕೋ ಚಳಿಯಾಯಿತು. ಅಲ್ಲಿ ನಿಲ್ಲಲೂ ಆಗಲಿಲ್ಲ. ಅಮ್ಮನ ಉತ್ತರವನ್ನು ನಿರೀಕ್ಷಿಸದೆ ಅಲ್ಲಿಂದ ಹೊರಟು ಹೋದನು.

---

## ೨

## ಕಂಠೀವಾವ

ಮನಸ್ಸಿಗೆ ಆಯಾಸವಾಗಿರುವಾಗ, ಒಂದಿಷ್ಟು ಹೆಚ್ಚು ಕಡಿಮೆ ಯಾದರೂ ಕೋಪ ಬರುವುದು ಲೋಕ ರೂಢಿಯಷ್ಟೆ? ಅದನ್ನು ಬೇರೆಡೆ ನಿಜವೆನ್ನಿ ಸುಳ್ಳೆನ್ನಿ, ಸಾವಿತ್ರಮ್ಮನವರಲ್ಲಂತೂ ನಿಜವಾಗಿತ್ತು. ಆ ದಂಪತಿ ಗಳಿಗೆ ಇರುವ ದುಃಖವು ಮಗಳದು. ಆದರೂ ಅವರು ಕಾರಣ ಹುಡುಕು ವುದು ಇನ್ನೆಲ್ಲೊ? ಇವೊತ್ತೂ ಹಾಗೆಯೇ ಆಗಿದೆ. ಸಾವಿತ್ರಮ್ಮನವರು ಮಗಳಿಗೆ ನೀರೆರೆದು ತಲೆಕಾಸಿ ಮಡಿಯುಟ್ಟು ಅಡುಗೆಗೆ ಬಂದರು. ಏಕೋ ಏನೋ ಅಂದು ಒಲೆಯು ತಟ್ಟನೆ ಹೊತ್ತಿಕೊಳ್ಳದೆ ಹೊಗೆಯಾಡುತ್ತ ರಗಳೆ ಮಾಡಿತು. ಮಗಳ ದೇಹ ಸೌಂದರ್ಯವನ್ನು ನೋಡಿ "ಇವಳೂ ಅವ ನಿಗೆ ಬೇಡವಾದಳಲ್ಲ?" ಎಂದು ನೊಂದಿದ್ದ ಮನಸ್ಸು ಒಲೆಯ ಮೇಲೆ ಕೋಪ ಮಾಡಿಕೊಂಡಿತು. ಒಲೆಯಲ್ಲಿ ಉರಿಯು ಮೂಡಲಿಲ್ಲವೆಂದು ಅವರ ಮನಸ್ಸಿನಲ್ಲಿ ಉರಿಯು ಮೂಡಿತು. ಆದರೆ ಆಕೆ ಕಷ್ಟವಾಗಲಿ, ಸುಖವಾಗಲಿ, ಬಾಯಲ್ಲಿ ಆಡುವವರಲ್ಲ. ಅದಲ್ಲದೆ, ಆ ಮುಖದ ಬೇಸರ, ಗಡುಸು, ಚಿತ್ತದ ನಿಷ್ಠುರತೆ ಇವುಗಳನ್ನು ಮಾತ್ರ ಬೇರೆ ತೆಗೆದಿಟ್ಟು ಅದಕ್ಕೆ ನುಡಿಯುವ ಶಕ್ತಿಯನ್ನು ಕೊಟ್ಟಿದ್ದರೆ, ಅವು ಮುಂಗಾರಿನ ಮೋಡಕ್ಕಿಂತ ಹೆಚ್ಚಾಗಿ ಮೊಳಗುತ್ತಿದ್ದವು.

ಈ ವೇಳೆಗೆ ಸರಿಯಾಗಿ ಶ್ರೀಕಂಠಯ್ಯನವರು ಬಂದರು. ಆ ಊರಿನಲ್ಲಿ ಅಯ್ಯನವರಿಗೆ ಬಹಳ ಗೌರವ. ಆತನ ಮನಸ್ಸು ದೀನಾನಾಥರನ್ನು ನೋಡಿ ಅಯ್ಯೋ ಎಂದು ಮರುಗುವುದು; ತುಂಟರನ್ನು ಕಂಡರೆ ಶಠಂ ಎಂದು ಬಿಗಿದುಕೊಳ್ಳುವುದು. ಈ ಎರಡು ಗುಣದಿಂದ ಎಲ್ಲರಿಗೂ ಅವರಲ್ಲಿ ವಿಶ್ವಾಸ. ಏನಾದರೂ ಆಗಲಿ, ಯಾರಾದರೂ ಆಗಲಿ, ಹಸಿದ ಹೊತ್ತಿಗೆ ಅಯ್ಯನವರ ಮನೆಗೆ ಹೋದರೆ, ಒಂದು ತುತ್ತು ಅನ್ನ, ಒಂದು ಥಾಲಿ ನೀರು ಉಂಟು ಎಂದು, ಅವರಿಗೆ ಗೌರವ. ಆ ಊರಿನ ಶ್ರೀಮಂತರು ರಾಮಯ್ಯನವರು ಒಬ್ಬರಿಗೆ ಶ್ರೀಕಂಠಯ್ಯನವರಿಗಿಂತ ಮರ್ಯಾದೆ.

ಅವರನ್ನು ಬಿಟ್ಟರೆ, ಶ್ರೀಕಂಠಯ್ಯನವರ ಮರ್ಯಾದೆ ಶೋಕದಾರ್ರು ಅವು ಲ್ದಾರರಿಗೂ ಕೂಡ ಇಲ್ಲ.

ಶ್ರೀಕಂಠಯ್ಯನವರು ಅತ್ತ ಕಡೆ ಹೋಗುತ್ತಿದ್ದವರು ತಿರುಗಿ ಇವರ ಮನೆಗೆ ಬಂದರು. “ ಜಹಗೀರುದಾರರೇ ! ” ಎಂದು ಕೂಗಿದರು. ಅವರು ಮನೆಗೆ ಬರುವುದಕ್ಕೆ ಗಂಡಸರು ಇದ್ದೇ ಇರಬೇಕೆಂಬ ನಿಯಮವಿಲ್ಲ, ಬಂದರು. ಸಾವಿತ್ರಮ್ಮನವರು “ ಬನ್ನಿ ಕೂತುಕೊಳ್ಳಿ, ತೋಟದ ಕಡೆಗೆ ಹೋಗಿದ್ದಾರೆ, ಬರುವ ಹೊತ್ತಾಯಿತು. ” ಎಂದರು. “ ಏನು ಸಾಕಮ್ಮ ! ನಿನ್ನ ಕೈಯಿನ ಅಡುಗೆ ಊಟ ಮಾಡಿ ಬಹಳ ದಿನವಾಯಿತು. ನಾಲಗೆ ಚಪಲವಾಗುತಿದೆ. ಮಗಳ ಪ್ರಸ್ತ ಮಾಡಿ ಮಂಡಿಗೆ ಊಟ ಹಾಕತೀಯೆ ಎಂದು ಕಾದಿದ್ದೇನೆ. ” ಎಂದರು ಶ್ರೀಕಂಠಯ್ಯನವರು.

ಸಾವಿತ್ರಮ್ಮನವರ ಕಣ್ಣಲ್ಲಿ ಒಂದು ತೊಟ್ಟು ನೀರು ಬಂತು. ನೀರು ತರಿಸಿದ ಪಾಪವು ಹೊಗೆಯ ಮಡುಲಿಗೆ ಬಿತ್ತು. ಆಕೆಯು ನೀರು ಒರೆಸಿಕೊಂಡು, “ ಎಲ್ಲಿ ? ನೀವೆಲ್ಲ ಸುಮ್ಮನೆ ಕೂತಿದ್ದರೆ ಊಟ ಹೇಗಾಗುತ್ತೆ ? ಹೋಗಿ, ಅಳಿಯನ್ನ ಒಪ್ಪಿಸಿಕೊಂಡು ಬನ್ನಿ. ಅವರಿಗೂ ಹಗಲೂ ರಾತ್ರಿ ಇದೇ ಯೋಚನೆಯಾಗಿ ಹೋಗಿದೆ ” ಎಂದರು.

ಆ ವೇಳೆಗೆ ಮಗಳು ತುಂಗಮ್ಮನೂ ಬಂದಳು. ಅಯ್ಯನವರು “ ತಾಳೇಗರಿ ಹಾಗಿದ್ದಾಳೆ. ನೋಡಿದರೆ ಕಣ್ಣೀರು ಆಗುವ ಹಾಗಿದೆ. ಇಂಥಾ ಹುಡುಗೀನಾ ಪ್ರಸ್ತ ಮಾಡಿಕೊಂಡು ಸುಖವಾಗಿರುವದಕ್ಕೆ ಅವನಿಗೇನು ತೆವಲು ! ತುಂಗ! ನೀನು ಹೂ ಅನ್ನೆ ! ಹೋಗಿ ನಿನ್ನ ಗಂಡನಿಗೆ ಮೂಗುದಾರ ಹಾಕಿ ಎಳೆದುಕೊಂಡು ಬರುತ್ತೇನೆ. ನೋಡೋವಂತೆ ನನ್ನ ಸಾಹಸನಾದರೂ ” ಎಂದರು.

“ ನೀನು ಅದಷ್ಟು ಮಾಡು. ನಿನಗೊಂದು ಸೊಗಸಾದ ಕಲಾಪತ್ತಿನ ಪಂಚೆ ಒಂದು ಜೊತೆ ಓದಿಸುತ್ತೇನೆ ” ಎಂದು ರಾಮಯ್ಯನವರೂ ಒಳಕ್ಕೆ ಬಂದರು.

ಶ್ರೀಕಂಠಯ್ಯನವರ ಬಾಯಿ ಬಲಿತು ನುಡಿಗೆ ಬಣ್ಣವೇರಿತು; " ಈಗ ಅವನಿಗೇನಂತೆ ಗುಲುಗು ? ಯಾಕೆ ಬರೋಲ್ಲ ಅನ್ನೋದು ? " ಎಂದು ಆರಂಭಿಸಿದರು.

" ಕಾರಣವಾದರೂ ಹೇಳಿದರೆ ಏನಾದರೂ ಮಾಡಬಹುದು. ನಾನೂ ನಾನಾ ವಿಧವಾಗಿ ಹೇಳಿಸಿದೆ. ಹೋಗಿ ಆಕೆ, ಆ ಕಾವೇರಮ್ಮನವರಿಗೂ ಹೇಳಿದೆ. ಆಕೆಯೂ ನಮಗಿಂತ ಹೆಚ್ಚಾಗಿ ಕಣ್ಣೀರು ಬಿಡುತ್ತಾರೆ. ಈ 'ಮಾತೆತ್ತಿದರೆ, ಮಾತುಕೊಟ್ಟು ಮಾತನಾಡದೆ ಹೊರಟು ಹೋಗ್ತಾನೆ ನಾನೇನು ಮಾಡಲಪ್ಪ' ಎಂದು ಮರಗುತ್ತಾರೆ. ಏನು ಮಾಡೋದು ಎನ್ನೋದೇ ತಿಳಿಯದೆ ಹೋಗಿದೆ. ಮೈನೆರೆದು ಒಂದು ವರ್ಷವಾಗುತ ಬಂತು " ಎಂದು ರಾಮಯ್ಯನವರು ಭಾರದ ಮಾತು ಆಡಿದರು.

ಶ್ರೀಕಂಠಯ್ಯನವರು, " ರಾಮಣ್ಣ ! ಕಾಲ ಕೆಟ್ಟು ಹೋಗಿದೆ. ಮೊದಲೇ ಅವನು ಶ್ರೀಮಂತರ ಮಗ. ದುಶ್ಚಾಳಿ ಕಾಲು ಹಾಕಿಕೊಂಡಿದೆಯೋ ಏನೋ ? ಯಾವುದಾದರೂ ಪಿಶಾಚಿ ಗಂಟು ಬಿದ್ದು ಕಿವೀಗೇನಾದರೂ ಊದಿದೆಯೋ ಏನೋ ? ಅದೆಲ್ಲ ಇರಲಿ. ನಾನು ಹೋಗಿ ನಿನ್ನ ಅಳಿಯನ್ನ ಒಪ್ಪಿಸಿಕೊಂಡು ಬರುತ್ತೀನೆ. ಆ ಭಾರ ನನಗಿರಲಿ, ನನಗೇನು ಮರ್ಯಾದೆ ಮಾಡುತೀ ಹೇಳು ? " ಎಂದರು.

" ಕಂಠೀ ! ಈ ಊರಿನ ತುಂಟ ಗೂಳಿ ಎಂದುಕೊಂಡೆಯಾ ಅಳಿಮಯ್ಯ ಎಂದರೆ ! ದೊಣ್ಣೆ ತೆಗೆದುಕೊಂಡು ಇಕ್ಕಳಿಸಿ, ದಪ್ಪ ಮೂಗುದಾರ ಸೆಳೆದು ಹತೋಟಿಗೆ ತರೋಕೆ ? ದೊಡ್ಡ ಮನುಷ್ಯರ ಮಗ ! ತಾನೂ ದೊಡ್ಡ ಮನುಷ್ಯ ! ಅವನನ್ನು ಹಿಡಿದು ಏನು ಗೋಣೀ ಚೀಲದಲ್ಲಿ ತುರುಕಿ ಹಿಡಿತರೋಕೆ ಆಗುತ್ತೇನಯ್ಯ ? "

" ನೋಡಿದಿಯಾ ಆಗಲೇ ಕಲಾಬತ್ತಿನ ಪಂಚೆ ಜೋತೆಗೆ ಸಂಚಕಾರ ತರೋ ಮಾತೇ ಆಡುತ್ತಿದ್ದಿಯಲ್ಲ ಮತ್ತೆ ? ನೀನು ನನಗೆ ಏನು ಕೊಡ್ತೀಯಾ ಹೇಳು. ನೋಡಿದೆಯಾ ನಾಕಮ್ಮಾ ನಿನ್ನ ಗಂಡನ ಬುದ್ಧಿವಂತಿಕೆ ? "

“ ಆಗಲೇ ಹೇಳಿದಾರಲ್ಲ ಕಲಾಬತ್ತಿನ ಪಂಚೆ ಎಂತ, ೨೫ ರೂಪಾಯಿನ ಜೊತೆ ನಾನು ತೆಗೆಸಿ ಕೊಡುತ್ತೀನಿ. ನನ್ನ ಮಾತಿನಲ್ಲಾದರೂ ನಂಬಿಕೆಯಿದೆಯೋ ಇಲ್ಲವೋ ? ”

“ ಈಚೆಗೆ ನಂಬಿಕೆ ತಪ್ಪಿ ಹೋಗ್ತಿದೆಯಮ್ಮಾ ! ನೀವಿಬ್ಬರೂ ಬಹಳ 'ಘಾಟಿ'ಗಳಾಗತಾ ಇದ್ದೀರಿ. ನಿಮ್ಮಿಬ್ಬರ ಮಾತು ಇರಲಿ. ನಮ್ಮ ತುಂಗ ಏನಂತಾಳೆ ನೋಡೋಣ ! ತುಂಗಾ ! ಏನಮ್ಮಾ ! ನಿನ್ನ ಗಂಡನ್ನ ಕರೆದು ಕೊಂಡು ಬಂದರೆ, ನನಗೇನು ಕೊಡ್ತೀಯಾ ? ”

ಬಾಗಿಲು ಮರೆಯಿಂದ ಒಂದು ಕಿಲಕಿಲ ನಗು ಕೇಳಿಸಿತು. “ ಹನುಮಂತರಾಯನಿಗೆ ಹರಕೆ ಹೊತ್ತರೆ ಒಂದು ಕಾಯಿ ಎರಡು ಹಣ್ಣು ನಿಮಗೆ ಅದಕ್ಕೆ ಎರಡರಷ್ಟು ಕೊಟ್ಟರಾಯಿತು ” ಎಂದು ತುಂಗಳ ಮುದ್ದು ನುಡಿ ಕೇಳಿಸಿತು.

“ ಎಲಾ ! ತುಂಟ ಹುಡುಗಿ ! ನೆಡೆತುಕೊಂಡು ಕೂತಿರೋ ಹನುಮಂತರಾಯನ್ನ ಹಿಡುಕೊಂಡು ಬಂದರೆ ಎರಡು ತೆಂಗಿನಕಾಯಿ ನಾಲ್ಕು ಬಾಳೇ ಹಣ್ಣಿನಲ್ಲಿ ರುಣ ತೀರಿಸಿ ಬಿಡ್ತೀನಿ ಅಂತಿಯಾ? ಭೇಷ್ ಭೇಷ್ ! ಅದೆಲ್ಲ ಆಗೋಲ್ಲಮ್ಮ, ಏನು ಕೊಡ್ತೀಯೋ ಹೇಳು ಮೊದಲು ”

“ ನಾನೇನು ಕೊಡಲಿ? ನಿಮಗೊಂದು ರೇಷ್ಮೆ ವಸ್ತ್ರ, ಅತ್ತೆಗೊಂದು ರೇಷ್ಮೆ ಸೀರೆ ತೆಗೆಸಿ ಕೊಡುತ್ತೀನಿ ”

ಶ್ರೀಕಂಠಯ್ಯನಿಗೆ ಆ ಮಾತು ಕೇಳಿ ಏಕಕಾಲದಲ್ಲಿ ನಗುವೂ ಅಳುವೂ ಬಂದುವು. ಮುಂದಕ್ಕೆ ಮಾತನಾಡಲು ಸಾಧ್ಯವಾಗಲಿಲ್ಲ. ಆದರೂ ಕಷ್ಟದಿಂದ ದುಃಖವನ್ನು ತಡೆದುಕೊಂಡು, ಮಾತು ಹೊರಳಿಸುತ್ತಾ, “ ತಂದೆಯ ಉಡುಗರೆಯಾಯಿತು. ಮಗಳ ಉಡುಗರೆಯಾಯಿತು. ತಾಯಿಯ ಕಡೆಯಿಂದ ಏನು ಅಪ್ಪಣೆಯಾಗಿ ಹೋಗಲಿ. ” ಎಂದರು.

ಸಾವಿತ್ರಮ್ಮನವರೂ “ ಇನ್ನೇನು ತುಂಗಾನೇ ಹೇಳಿದಳಲ್ಲ. ಅವಳು ಹೇಳಿದ್ದರಲ್ಲಿ ರವಕೆ ಬಿಟ್ಟು ಬಿಟ್ಟಿದ್ದಾಳೆ. ಕಲಾಪತ್ತಿನ ರವಕೆ ತೆಗೆದು ಕೊಡುತ್ತೇನೆ ” ಎಂದರು.

" ಸರಿ, ಬೆಳಗೆದ್ದು ನರೀ ಮೊಕ ಕಂಡಿದ್ದೆ ಎನ್ನೋ ಹಾಗಿದೆ. ಒಂದು ಜೊತೆ ಪಂಚೆ ರೇಷ್ಮೆ ವಸ್ತ್ರ ನನಗೆ. ಅವಳಿಗೆ ರೇಷ್ಮೆ ಸೀರೆ, ಕಲಾಪತ್ತಿನ ರವಕೆ, ಒಳ್ಳೇ ದಳ್ವಾಳಿ, ಭಲೆ, ಸಾಕವ್ಮಾ! ಸರಿ. ಇವೊತ್ತು ಪಾಯಸ ಪರವಾನ್ನ ಮಾಡಿಬಿಡವ್ಮಾ! ಲಕ್ಷಣವಾಗಿ ಔತಣ ಮಾಡಿಸಿಕೊಂಡು ಹೋಗಿಬಿಟ್ಟು ಬರುತ್ತೇನೆ. ಏನು! ರಾಮಣ್ಣಾ! ನಿನ್ನ ಅಳಿಯನಿಗೆ ಯಾವುದಾದರೂ ಪಿಶಾಚಿ ಗಿಶಾಚಿ ಗಂಟು ಬಿದ್ದಿದೆಯೋ? ಹಾಗೇನಾದರೂ ಇದ್ದರೆ ಹೇಳು. ಅದಕ್ಕೂ ಏನಾದರೂ ತೋಡು ಮಾಡಿಕೊಂಡು ಹೋಗ್ತೇನೆ."

" ಅಂಥಾದ್ದೇನೂ ಕಾಣೆ. ಅವನಿಗೆ ಇಸ್ಪೀಟು ಹುಚ್ಚು ಹಿಡಿದಿದೆಯಂತೆ! ಅದು ಬಿಟ್ಟು ಇನ್ನೇನೂ ಇಲ್ಲ ಅಂತ ಎಲ್ಲರೂ ಹೇಳಿದರು. ಏನೋ ಹೇಗೋ? ಈ ಕಾಲದವರಿಗೆ ಬುದ್ಧಿ ಗಳಿಗೊಂದು ಜಾತಿ! ಯಾರು ಬಲ್ಲರು?"

" ಹೂ, ಇರಲಿ ಬಿಡು. ನಿನ್ನ ಮಗಳನ್ನ ಒಂದು ಗಳಿಗೆ ನನ್ನ ಜೊತೇಲಿ ಕಳುಹಿಸಿಕೊಡು. ಒಂದು ಐದು ರೂಪಾಯಿ ಕೊಡು. ಒಂದು ಗಳಿಗೆ ಮೋಟಾರು ಕಳುಹಿಸು."

" ಆಗಬಹುದು."

ಇನ್ನೊಂದು ಗಳಿಗೆಯೆನ್ನುವುದರೊಳಗಾಗಿ ತುಂಗವ್ಮನು ಹೊಸದೊಂದು ಸೀರೆ ಉಟ್ಟುಕೊಂಡು ಆಡಂಬರವೇನೂ ಇಲ್ಲದ ವೇಷದಲ್ಲಿ 'ಕಂಠೀಮಾವ'ನೊಡನೆ ಮೋಟಾರಿನಲ್ಲಿ ಎಲ್ಲಿಗೋ ಹೋದಳು. 'ಕಂಠಿಯು ಒಪ್ಪಿಕೊಂಡಿದ್ದಾನೆ. ಇನ್ನು ದಿಗಿಲಿಲ್ಲ. ಮಗಳ ಸೆರೆ ತಪ್ಪುವುದು. ಮಾನ ಉಳಿಯುವುದು' ಎಂದು ಗಂಡ ಹೆಂಡರಿಬ್ಬರಿಗೂ ಮನಸ್ಸಿನಲ್ಲಿ ಎಷ್ಟೋ 'ಹಾಯಿರು!'

ಆ ದಿನ ಸಾತವ್ಮನವರ ಅಡುಗೆಮನೆಯಿಂದ ಹೊರಟ ಸುವಾಸನೆಯೇ ಆ ಬಿದಿಯಲ್ಲಿ ತಿರುಗುವವರಿಗೆಲ್ಲ ಅವರ ಮನೆಯ ಮುಂದಿನ ಶುಭಕಾರ್ಯದ ಲಗ್ನ ಪತ್ರಿಕೆಯನ್ನು ಹಂಚಿತು.

---

೩

## ಕಾವೇರಮ್ಮನವರು

ರಾಯನು ಹೊರಟುಹೋದನೆಂಬುದು ಮೋಟಾರ್ ಹಾರನ್ನಿಂದ ತಿಳಿಯಿತು. ಆದರೂ ಕಾವೇರಮ್ಮನವರು ಮೇಲಕ್ಕೇಳಲಿಲ್ಲ. ಕುಳಿತಿದ್ದ ಮಣೆಯೂ ಕೊಂಚ ಜಾರಿತು. ಅಡುಗೆಯವಳು ಮೂರು ನಾಲ್ಕು ಸಲ ಬಂದು ಬಂದು ಮುಖವನ್ನು ತೋರಿಸಿದಳು. ಕೊನೆಗೆ "ನಿನಗೆ ಅವಸರ ವಾದರೆ ನೀನು ಹೋಗಮ್ಮ! ಇವೊತ್ತು ನಾನು ಈಗಲೇ ಊಟ ಮಾಡುವು ದಿಲ್ಲ." ಎಂದುಬಿಟ್ಟರು. ಅಡುಗೆಯವಳು ಮಧ್ಯಾಹ್ನ ಒಂದು ಗಂಟೆಯ ವರೆಗೂ ನೋಡಿ, ತಾನು ಊಟ ಮಾಡಿಕೊಂಡು ಹೊರಟುಹೋದಳು.

ಕಾವೇರಮ್ಮನವರ ಬೆಕ್ಕು ಆಕೆಯ ಮಗ್ಗುಲಲ್ಲಿ ಬಂದು ಮಲಗಿ ಕೊಂಡಿತ್ತು. ಅದೂ ನಿದ್ದೆ ಮಾಡಿ ಎದ್ದಿತು. ಇನ್ನೂ ಕಾವೇರಮ್ಮನವರು ಮೇಲಕ್ಕೆ ಏಳಲಿಲ್ಲ. ಅದು ತೊಡೆಯ ಮೇಲಕ್ಕೆ ಹತ್ತಿ ಕುಳಿತುಕೊಂಡಿತು. ಅನ್ಯಮನಸ್ಕರಾಗಿದ್ದ ಕಾವೇರಮ್ಮನವರು ಅದನ್ನು ಗಮನಿಸಲೇ ಇಲ್ಲ. ಆ ಬೆಕ್ಕು ಹಾಗೇ ತನಗೆ ಪುರಸ್ಕಾರವಿಲ್ಲದೆ ಹೋದುದನ್ನೂ ಗಮನಿಸದೆ ಇನ್ನಿಷ್ಟು ಹೊತ್ತು ಕುಳಿತಿತ್ತು. ಹಾಗೂ ಒಡತಿಯು ಚಲಿಸದಿರಲು, ತಾನೇ ಸ್ವಂತವಾಗಿ ಆಕೆಯ ಸಮಾಧಿಯನ್ನು ಭಂಗ ಮಾಡಲು, ತನ್ನ ಸರಸ ಮನೋಹರ ಗಾನವನ್ನು ಆರಂಭಿಸಿತು. ಶ್ರುತಿಗೆ ಸೇರಿಸಿಕೊಂಡು ಗಂಟಲು ಸರಿ ಮಾಡುವುದರಿಂದ ಹಿಡಿದು ರಾಗಗಳನ್ನು ಆಲಾಪನ ಮಾಡುವವರೆಗೂ, ಹಾಡುವ ಘನ ಸಂಗೀತಗಾರನಂತೆ ತನ್ನ ಜಾಣ್ಮೆಯನ್ನೆಲ್ಲ ಮೆರೆಯಿತು. ಆದರೂ ಅವರ ಸಮಾಧಿಯು ಭಂಗವಾಗಲಿಲ್ಲ. ಕೊನೆಗೆ, ಅವರ ಮೇಲೆ ಬಿದ್ದು ತಾನು ಮನೆಯ ಬೆಕ್ಕಾದರೂ ತನಗೂ ಉಗುರು ಇನ್ನೂ ಉಳಿದಿದೆಯೆಂಬು ದನ್ನೂ ತೋರಿಸುವುದಕ್ಕೋ ಏನೋ ಮೃದುವಾಗಿ ಪರಚಿತು. ಆಗ ಆಕೆಗೆ ಇತ್ತ ಮನಸ್ಸು ಹೊರಳಿ, "ಮುಂಡೇದೆ? ನೀನು ವಾಸಿ ಈ ಮನುಷ್ಯರಿ ಗಿಂತ. ಎರಡು ದಿನ ಅನ್ನ ಹಾಕಿ ಹಾಲು ಹುಯ್ದುದಕ್ಕೆ ಹತ್ತಿರ ಬಿದ್ದು ಒದ್ದಾಡುತಿದ್ದೀಯೇ." ಎಂದು ಅದನ್ನು ಎತ್ತಿಕೊಂಡರು.

ಅದೇ ಸಮಯವೆಂದು ಬೆಕ್ಕು ತನ್ನ ದುಃಖವನ್ನೆಲ್ಲ ಹೇಳಿಕೊಂಡಿತು. ಕಾವೇರಮ್ಮನವರು, ಆ ದುಃಖದ ವರದಿಯನ್ನು ಕೇಳಿ, "ಅಯ್ಯೋ! ಮುಂಡೇದಕ್ಕೆ ಅನ್ನ ಹಾಕಲಿಲ್ಲವೇನೋ?" ಎಂದು ಎದ್ದು ಹೊರಟರು. ಅಡುಗೆ ಮನೆಯಲ್ಲಿ ಒಂದು ಮೂಲೆಯಲ್ಲಿ ಅದಕ್ಕಾಗಿ ಅಷ್ಟು ಅನ್ನ ಮೊಸರು ಹಾಕಿ ಒಂದು ತಟ್ಟೆಯನ್ನಿಟ್ಟಿತ್ತು. ಬೆಕ್ಕು ಅದನ್ನು ಒಲ್ಲದೆ ಹೋಯಿತು: ಆಕೆಯು ತಾನೇ ಅನ್ನವನ್ನು ಕಲಿಸಿಡುವವರೆಗೆ ಬಿಡಲಿಲ್ಲ. ಅನ್ನವನ್ನು ಕಲಸಲು ಹೋಗಿ ಮೊಸರಿನ ಕಲ್ಲು ಮಡಕೆಯನ್ನು ಎಡಗೈ ಯಲ್ಲಿ ತೆಗೆದುಕೊಳ್ಳುವುದಕ್ಕೆ ಹೋದರು. ಕಲ್ಲು ಮಡಿಕೆಯು ಬಿದ್ದು ಹೋಯಿತು. ಒಡೆದು ತುಂಡು ತುಂಡಾಯಿತು. ಅವರೂ ಒಂದು ಗಳಿಗೆ ಚೆಲ್ಲಿದ ಮೊಸರನ್ನೂ ಒಡೆದ ಕಲ್ಲು ಮಡಿಕೆಯನ್ನೂ ನೋಡುತ್ತ ನಿಂತಿದ್ದು, "ನಿನಗೂ ಆಯುಸ್ಸು ತೀರಿತೇ! ಹೋಗು" ಎಂದು ಬೇರೆ ಕಡೆಗೆ ತಿರುಗಿದರು.

ಬೆಕ್ಕು ಮತ್ತೆ ಬಂದು ಅಡ್ಡ ಕಟ್ಟಿತು. ಆಕೆಗೆ ಅದು ಮೊಸರನ್ನು ನೆಕ್ಕಲಿಲ್ಲವೆಂದು ಒಂದು ಹೆಮ್ಮೆಯ ಅಭಿಮಾನದ ಸಂತೋಷ. ಆದರೆ ಅದಕ್ಕೆ ಅನ್ನ ಹಾಕಲು, ಅದನ್ನು ಕಲಿಸಿಡುವುದಕ್ಕೆ ಒಳಗೆ ಬೇಡ. ಆದರೂ ಆ ಬೆಕ್ಕಿನ ಮೇಲಿನ ಅಭಿಮಾನದಿಂದ ಅದಕ್ಕೆ ಅಷ್ಟು ತುಪ್ಪಾನ್ನ ಕಲಿಸಿ ಹಾಕಿದರು. ಆ ವೇಳೆಗೆ ಮುಸರೆಯವಳು ಬಂದಳು. ಅಡುಗೆಯವಳು ಮುಚ್ಚಿಟ್ಟಿದ್ದ ಅಡುಗೆಯನ್ನೆಲ್ಲ ಅವಳಿಗೇ ಹಾಕಿಬಿಟ್ಟರು. ಅವಳು ಬಹು ಕಾಲದಿಂದ ಅನುಸರಿಸುವವರಿಗೆ ಸಾಧ್ಯವಾದ ಆತ್ಮೀಯತೆಯಿಂದ "ಇವತ್ತು ಬುದ್ಧಿಯವರೂ ಊಟ ಮಾಡಲಿಲ್ಲವಾ?" ಎಂದು ಕೇಳಿದಳು. ಆಕೆಯು 'ಇಲ್ಲ' ಎಂದು ಮಾತ್ರ ಹೇಳಿ ಹೊರಟುಹೋದರು.

ಸುಮಾರು ನಾಲ್ಕು ಗಂಟೆಯ ಹೊತ್ತು. ಗ್ರಾಮದ ಶಾನು ಭೋಗರು ಬಂದರು. ಕಾವೇರಮ್ಮನವರು ಕುಶಲಪ್ರಶ್ನಪೂರ್ವಕವಾಗಿ ಅವರು ಹೇಳಿದುದನ್ನೆಲ್ಲ ಕೇಳಿ "ಶಾನುಭೋಗರೇ! ತಾವು ತಂದಿರುವ ಹಣ ವನ್ನು ಬ್ಯಾಂಕಿಗೆ ಕಟ್ಟಿಬಿಡಿ" ಎಂದರು. ಅವರಿಗೆ ಆಶ್ಚರ್ಯವಾಯಿತು.

"ಇದುವರೆಗೆ ಹಣವು ಬಂದರೆ, ಅದನ್ನು ತೆಗೆದುಕೊಂಡು ಕಚ್ಚಾ ರಸೀತಿಯನ್ನೂ ಕೂಡ ಕೊಡುತ್ತಿದ್ದರು; ಇವೊತ್ತೇಕೆ ಹೀಗೆ ?" ಎಂದುಕೊಂಡು "ನಾಲ್ಕು ಗಂಟೆಯಾಗಿದೆ. ಈಗೆಲ್ಲಿ ಬ್ಯಾಂಕು ?" ಎಂದರು. "ಚಿಂತೆಯಿಲ್ಲ. ಕೋ ಆಪರೇಟಿವ್ ಬ್ಯಾಂಕೆಗೆ ರಾಯರ ಹೆಸರಿನಲ್ಲಿ ಕಟ್ಟಿಬಿಡಿ." ಎಂದರು. ಶಾನುಭಾಗರು ಮಾತನಾಡದೆ ಸುಮ್ಮನಾದರು. ಆದರೂ ಅಕಾಲದಲ್ಲಿ ಕಾರ್ಮೋಡವೇನೋ ಎದ್ದಿದೆಯೆಂಬುದು ಅವರಿಗೆ ಅರಿವಾಗದೆ ಹೋಗಲಿಲ್ಲ.

ಅಷ್ಟರಲ್ಲಿ ರಾಯರ ಮೋಟಾರು ಬಂದಿತು. ರಾಯರು ಬಂದು ತಮ್ಮ ಆಸ್ಥಾನವನ್ನು ಪ್ರವೇಶಿಸುತ್ತಿದ್ದ ಹಾಗೆಯೇ ಶಾನುಭೋಗರು ಬಂದು ಕಾಣಿಸಿಕೊಂಡರು. ಕುಶಲ ಪ್ರಶ್ನೆಗಳೂ ಆದುವು. ಶಾನುಭೋಗರು ಮೃದುವಾಗಿ "ಕಂದಾಯದ ಹಣವನ್ನು ತಂದಿದ್ದೇನೆ" ಎಂದರು.

"ಸರಿ. ಅಮ್ಮಾ ಅವರ ಬಳಿಯಲ್ಲಿ ಕೊಟ್ಟು ಬಿಡಿ."

"ಅವರು ಬ್ಯಾಂಕಿಗೆ ಕಟ್ಟಿಬಿಡಿ" ಎಂದರು.

"ಆ !"

"ಹೌದು. ಮೈಸೂರು ಬ್ಯಾಂಕಿಗೆ ಹೊತ್ತಾಗಿದೆಯೆಂದೆ. ಕೋ-ಆಪರೇಟಿವ್ ಬ್ಯಾಂಕಿಗೆ ಕಟ್ಟಿಬಿಡು ಎಂದರು. ಇದೇನು ಎಂದು ಯೋಚನ ಮಾಡುತ್ತಿದ್ದೆ. ತಾವೇ ದಯಮಾಡಿಸಿದಿರಿ."

ರಂಗರಾಯನು ನಿಂತಿದ್ದವನು ಹಾಗೆಯೇ ಕುಳಿತುಕೊಂಡನು. ಏನೇನೋ ಗುಣಾಕಾರ ಹಾಕಿ ಕೊನೆಗೆ ಹಣವನ್ನು ತಾನೇ ತೆಗೆದುಕೊಂಡು ರಸೀತಿಯನ್ನೂ ಬರೆದುಕೊಟ್ಟನು. ಶಾನುಭೋಗರಿಗೆ ಎಂದಿನಂತೆ ಉಪಚಾರಾದಿಗಳೆಲ್ಲವೂ ನಡೆಯುವುದಕ್ಕೆ ಏರ್ಪಾಡಾಯಿತು. ಅವರು ಹೊರಟು ಹೋದರು.

ಆ ವೇಳೆಗೆ ರಾಯರಿಗೆ ಟೀ ಬರಬೇಕು. ಕಾವೇರಮ್ಮನವರು ಸ್ವಂತವಾಗಿ ಟೀ ತಂದುಕೊಟ್ಟು ಒಂದು ಗಳಿಗೆ, ಗೃಹಕೃತ್ಯದಿಂದ ಹಿಡಿದು ಮೋಕ್ಷದವರೆಗೆ, ಎಲ್ಲ ಮಾತನಾಡಿ ಹೊರಟುಹೋಗಬೇಕು. ಟೀ ಬರಲಿಲ್ಲ.

ಕಾವೇರಮ್ಮನವರು ಬರಲಿಲ್ಲ. ರಾಯರು ಕಾದದ್ದು ಫಲವಾಗಲಿಲ್ಲ. ಐದು ಗಂಟೆ ಹೊಡೆಯುವವರೆಗೆ ಕಾದಿದ್ದು ಕೊನೆಗೆ ಸಮಾಧಾನವೇನೇನೂ ಉಳಿಯದಿರಲು, ರಾಯನು ಮತ್ತೆ ಹೊರಟು ಹೋದನು.

ಆ ದಿನ ರಾಯರು ಕ್ಲಬ್ಬಿಗೆ ಹೋಗಿ ಸೇರುವುದರೊಳಗಾಗಿ ಇಬ್ಬರು ಮೂವರಿಗೆ ಅಪಾಯವಾಗಬೇಕಾಗಿತ್ತು. ಬಹುಶಃ ಅದು ದಾರಿ ಹೋಕರ ಪುಣ್ಯವಿರಬೇಕು. ಕೊಂಚ ಕೊಂಚದರಲ್ಲಿ ಉಳಿದುಕೊಂಡರು. ಎಲ್ಲರಿಗೂ ಆಶ್ಚರ್ಯ! " ಜಹಗೀರದಾರ ಅಷ್ಟು ಜ್ಞಾನಶೂನ್ಯನಾಗಿ ಮೋಟಾರು ಬಿಟ್ಟಿದ್ದು ಯಾವೊತ್ತು ಇಲ್ಲವಲ್ಲ " ಎಂದು.

---

೪

# ರಾಯರ ಕ್ಲಬ್

ರಾಯರ ಕ್ಲಬ್ ಎಂದರೆ ದೇಶದಲ್ಲೆಲ್ಲಾ ಹೆಸರಾದುದು. ಅದು ಆರಂಭವಾದುದು ಸುಮಾರು ಐದು ವರ್ಷದ ಹಿಂದೆ, ರಾಯರು ಹೈಸ್ಕೂಲು ಮುಗಿಸಿಕೊಂಡು ಕಾಲೇಜಿಗೆ ಬಂದಾಗ. ಅವರಿಗೆ, ಟೆನ್ನಿಸ್ ಎಂದರೆ ಪ್ರಾಣ, ಫುಟ್‌ಬಾಲ್ ಎಂದರೆ ಜೀವ, ಕ್ರಿಕೆಟ್ ಎಂದರೆ ಓಕರಿಕೆ, ಹಾಕಿ, ಹಾಗೂ ಸೈ ಹೀಗೂ ಸೈ. ಈ ಐದು ವರ್ಷಗಳಲ್ಲಿ ಬೇಕಾದಷ್ಟು ಬದಲಾವಣೆಯಾಗಿ ಹೋಗಿತ್ತು. ರಾಯರು ಕಾಲೇಜು ಬಿಟ್ಟುಬಿಟ್ಟಿದ್ದರು. ಅವರಿಗೆ ಕಾಲೇಜಿನಲ್ಲಿ ಕುಳಿತು 'ಟೈಂ ವೇಸ್ಟ' ಮಾಡಲು ಮನಸಿಲ್ಲ. ಅವರೂ ಈ ಸಿದ್ಧಾಂತಕ್ಕೆ ಬಂದುದು ಮೂರು ವರ್ಷ ಒಂದೇ ಕ್ಲಾಸಿನಲ್ಲಿ ಕುಳಿತು ತಪಸ್ಸು ಮಾಡಿದ ಮೇಲೆ. ಪ್ರೊಫೆಸರುಗಳ ಪ್ರಸಾದವನ್ನು ಪಡೆದುಕೊಳ್ಳಲು ಚೆಕ್ಕು ಬರೆಯುವದಕ್ಕೆ ಕಲಿತರೆ ಮಾತ್ರ ಸಾಧ್ಯವಿಲ್ಲ ವೆಂಬುದು ಮನವರಿಕೆಯಾದ ಮೇಲೆ. ಮೊದಲನೆಯವರ್ಷ ಹೈಸ್ಕೂಲಿನಿಂದ ಕಾಲೇಜಿಗೆ ಬಂದರೆ ಜನರಲ್ ಲೆವೆಲ್‌ನಲ್ಲಿ ಸಡನ್ ಜಂಪ್ ಕಣೋ ಎಂದು ಸಮಾಧಾನ ಹೇಳಿದರು. ಎರಡನೆಯವರ್ಷ, ಸರಿ ಬಿಡಪ್ಪ, ದೊಡ್ಡಿಗೆ ಕೂಡಿದ ಹಾಗೆ ಕೂಡತಾರೆ, ಪರ್ಸನಲ್ ಅಟೆನ್‌ಷನ್ ಇಲ್ಲ; ನಮಗೆ ಇಂಟರೆಸ್ಟ್ ಹುಟ್ಟಿಲ್ಲ ಎಂದರು. ಮೂರನೆಯ ವರ್ಷದ ಕೊನೆಯಲ್ಲಿ 'ಇಟೀಸ್ ಎ ಪೀಸ್ ಅಫ್ ಷೀರ್ ಬ್ಯಾಡ್‌ಲಕ್'. ಇನ್ನು ನಾನು ಕಾಲೇಜಿಗೆ ಕಾಲಿಡೋಲ್ಲ ಎಂದುಬಿಟ್ಟರು.ಆಗಿನಿಂದ ಕ್ಲಬ್ಬಿಗೆ ಕಳೆಯೇರಿತ್ತು. ಈ ಮೊದಲು ಸಂಜೆ ೪ ರಿಂದ ೯ಘಂಟೆಯವರೆಗೆ ಮಾತ್ರ ಕ್ಲಬಿನಲ್ಲಿ ಕಾಣುತ್ತಿದ್ದ 'ಲೈಫ್' ಈಗ ಬೆಳಿಗ್ಗೆ ೯ ರಿಂದ ಸರಿ ರಾತ್ರಿಯವರೆಗೂ ಉಂಟು. ಮತ್ತೊಂದು ಗುಟ್ಟು, ಅಲ್ಲಿ ಮೆಂಬರುಗಳಲ್ಲಿ ಅನೇಕರು ರಾಯರಿಗೆ ಅಂಕಿತರು. ರಾಯರು ಇಸ್ಪೀಟಿನ ನೆವದಿಂದ ಅನೇಕರಿಗೆ ಜೀವನವನ್ನು ನಡೆಸುತ್ತಿದ್ದರು. ಆ ಮಿತ್ರ ರೆಲ್ಲ ಗರಗಸದ ಹಾಗೆ. ಸೋತು ಹಿಂದಕ್ಕೆ ಹೋದರೂ ಚಿಂತೆಯಿಲ್ಲ. ಗೆದ್ದು

ಮುಂದಕ್ಕೆ ಬಂದರೂ ಚಿಂತೆಯಿಲ್ಲ. ಮರದಿಂದ ಪೊಟ್ಟು ಉದುರುವಂತೆ ರಾಯರಿಂದ ಹಣವನ್ನು ಉದುರಿಸಿಕೊಳ್ಳುವರು.

ಈ ದಿನವೂ ರಾಯರ ಕ್ಲಬ್ಬಿನಲ್ಲಿ ಎಂದಿನಂತೆ, ಕಾರ್ಡ್ಸ್‌ಪಾರ್ಟಿ ಆರಂಭವಾಗಿದೆ. ರಾಯರು ಆಡುತ್ತಿದ್ದರೆ, ಮಾತುಗಳು ಮನೆ ಮನೆಯಾಗಿ ಬಣ್ಣ ಬಣ್ಣವಾಗಿ ಬರುತ್ತಿರಬೇಕು. ಎಲ್ಲರೂ ಆ ಮಾತಿನ ಸೊಗಸನ್ನು ಸವಿದು ತಲೆದೂಗಬೇಕು: ಆದರೆ ರಾಯರು ಈ ದಿನ ಏನೋ ಯೋಚನೆ ಯಲ್ಲಿ ಮುಳುಗಿದ್ದಾರೆ. ಕೈಯಲ್ಲಿ ಹಿಡಿದಿರುವ ಇಸ್ಪೀಟಿನ ಎಲೆಗಳಿಗೆಲ್ಲ ಜೀವ ಬಂದಂತಿದೆ. ಅವು ಕಪ್ಪಾಗಲಿ, ಕೆಂಪಾಗಲಿ, ನೋರೆ ಕಪ್ಪಗೆ ಮಾಡಿ ಕೊಂಡು ದುರುಗುಟ್ಟಿಕೊಂಡು ನೋಡುವಂತಿವೆ. ಯಾವುದೋ ಎಲೆ ಯನ್ನು ನೋಡಿಕೊಂಡು ಏನೋ ಎಣಿಸಿಕೊಂಡು ಆಟವಾಡುತ್ತಿದ್ದಾರೆ. ಅಂದಿನ ಆಟವು ಯಾರಿಗೂ ರುಚಿಸದು. ಎಲ್ಲರಿಗೂ ಬೇಸರವಾಗುವಷ್ಟು ನೀರಸವಾಗಿದೆ. ರಾಯರ ಜೊತೆಯಲ್ಲಿ ಆಡುತ್ತಿದ್ದವನಂತೂ ರೇಗಿ ರೇಗಿ ರಂಗು ರಂಗು ಆಗಿಬಿಟ್ಟಿದ್ದಾನೆ. ಆಟವೊಂದೊಂದು ಹೋದ ಹಾಗೆಲ್ಲ ರಾಯನು ಒಂದೊಂದು ರೂಪಾಯಿ ಎಸೆದು ಅವನನ್ನು ಸಮಾಧಾನ ಮಾಡುತ್ತಿದ್ದಾನೆ. ಕೊನೆಗೆ ರಾಯನು "ಕೋಟ್" ಹೊಡೆಯಬೇಕಾ ಗಿದ್ದು ತಪ್ಪಿ ಹೋದಾಗಲಂತೂ ಅವನ ಸಹನೆಯ ಮಟ್ಟ ಏರಿತು. ಸಮಾಧಾನದ ಕೆರೆಯು ಒಡೆದುಹೋಯಿತು. ತಾನು ಎರಡು ಜಾಕಿ ಆಡಿ, ರಾಯನ "ಜೋರಿ"ಗಳನ್ನೆಲ್ಲ ಕಸಿದುಕೊಂಡಿದ್ದಾನೆ. ಉಳಿದ ಮೂರು ತುರುಫೂ ರಾಯನ ಕೈಯಲ್ಲಿಯೇ ಇದೆ. ಒಂದು ತುರುಫಿನಲ್ಲಿ ತಾನೇ ಹೊಡೆ ದಿದ್ದಾನೆ. ಇಷ್ಟಾದರೂ ಪಟ್ಟು ತನ್ನದೆಂಬ ಜ್ಞಾನವಿಲ್ಲ. 'ಕೋಟ್', ಹೇಳಲಿಲ್ಲ. ಅವನು ಕೆಂಡ ಕೆಂಡವಾಗಿ 'ನಿನ್ನ ಜೊತೆಯಲ್ಲಿ ಆಡುವನಿಗೆ ಬುದ್ಧಿಯಿಲ್ಲ' ಎಂದು ಎಲೆಗಳನ್ನು ಹರಿದು ಎಸೆದು ಹೊರಟು ಹೋದನು. ರಾಯನು ಏನು ಹೇಳಿದರೂ ಕೇಳಲಿಲ್ಲ. ಹಣವೂ ಅವನನ್ನು ಹಿಂತಿರುಗಿಸ ಲಿಲ್ಲ. ರಾಯನೂ ಅಪ್ರತಿಭನಾಗಿ 'ಹೋಗಲಿ' ಇಷ್ಟೊತ್ತಿಗೆ ಸಾಕು ಮಾಡೋಣ' ಎಂದು ಸುಮ್ಮನಾದನು.

ರಾಯನಿಗೆ ಸುಮ್ಮನೆ ಕುಳಿತಿರಲು ಆಗಲಿಲ್ಲ. ಒಂದು ಸೆಟ್ ಟೆನ್ನಿಸ್ ಆಡೋಣ ಎನ್ನಿಸಿತು. ಕಾರ್ಡ ಟೇಬಲ್ಲಿನ ಸುದ್ದಿಯು ಟೆನ್ನಿಸ್ ಕೋರ್ಟಿಗೆ ಹೋಗುವುದಕ್ಕೆ ಮೊದಲೇ ಹೋಗೋಣ ಎಂದು ಮನಸ್ಸು ಒಮ್ಮೆ ಅಪ ಸರಿಸಿತು. ರಾಯರಿಗೆ ಅಲ್ಲೂ ಏಕೋ ಬೇಸರ. ಆದರೂ ಅವರ ಬಾಯಿಂದ ಹೊರಟ ಆ ಮಾತನ್ನೇ ಹಿಡಿದು ಆರಾಧಕರು ಬಲವಂತ ಮಾಡಿದರು. ರಾಯರ ಸವಾರಿಯು ಕೋರ್ಟಿಗೆ ದಯಮಾಡಿಸಿತು. ರ್‍ಯಾಕೆಟ್ಟೂ ಬಂದಿತು. ರಾಯರೂ ಆಟಕ್ಕಿಳಿದರು. ಆದರೆ, ರಾಯರ ಕೈಬಲವನ್ನು ಯಾವ ದೆವ್ವವು ಅಪಹರಿಸಿತ್ತೊ, ಈ ದಿನ ಅವರು ಚೆಂಡನ್ನು ಹಿಂತಿರುಗಿಸಿ ಹೊಡೆದರೆ ಅದು ಮುಂದಕ್ಕೆ ಹೋಗಲೊಲ್ಲದು. ಎದುರುಗಡೆಯವನಿಗೆ ಒಂದೇ ಸರ್ವಿಸ್ಸಿನಲ್ಲಿ "ಗೇಮ್" ಊ ಆಯಿತು. ಎಲ್ಲರೂ ಬಂದು ಸುತ್ತಿಕೊಂಡು ವಿಚಾರಿಸಿದರು. ರಾಯರು ಏನನ್ನೋ ಮರೆಮಾಚಿ ಏನನ್ನೋ ಹೇಳಿ, "ಬಹುಶಃ ಆಕ್ಸಿಡೆಂಟ್ ಆಗಬೇಕಾಗಿತ್ತಲ್ಲ, ಅದರ ಷಾಕ್‌ನಿಂದ ಇನ್ನೂ ರಿಕವರ್ ಆಗಿಲ್ಲವೆಂದು ಕಾಣುತ್ತದೆ ಅಷ್ಟೇ!" ಎಂದು ತೊಪ್ಪೆ ಸಾರಿದರು. ಆದರೂ ಪ್ರತಿಯೊಬ್ಬರೂ "ಉಂಟೇ! ಉಂಟೇ! ಇನ್ನೂ ಏನೋ ಭಾರಿ ಆಕ್ಸಿಡೆಂಟೇ ಆಗಿರಬೇಕು." ಎಂದು ಊಹೆ ಕಟ್ಟಿದರು. ಮತ್ತೊಬ್ಬರು, "ರಾಯರು ಕೋಪ ಮಾಡಿಕೊಳ್ಳಬಾರದು. ಆಕ್ಸಿಡೆಂಟ್ ಆಗಿರೋದು ಪೊರಗಲ್ಲಿ ಒಳಗೆ. ಆದರೆ, ಅದರ ನೇಚರ್ ಮಾತ್ರ ನನಗೆ ಗೊತ್ತಿಲ್ಲ'! ಎಂದರು.

ರಾಯನಿಗೆ ಇನ್ನೊಬ್ಬರು ತಮ್ಮ ವಿಚಾರವನ್ನು ಅಷ್ಟಾಗಿ ಹುಡುಕಿ ನೋಡುವುದು ಬೇಡ. ಮನಸ್ಸಿಗೆ ಕೋಪ ಬಂದಿತು. ಆದರೂ ಮಾತನಾಡಲಿಲ್ಲ. ಅದೇ ಮೌನದ ಸುಸಂಧಿಯನ್ನೂ ಸಾಧಿಸಿ ಮತ್ತೊಬ್ಬರು, "ರಾಯರೇ! ಅದೇನು ಅಪ್ಪಣೆಯಾಗಲಿ. ಆಕ್ಸಿಡೆಂಟ್ ಆಗಲಿಲ್ಲ. ಅದಕ್ಕಾಗಿ ಚಿಂತಿಸಬೇಕಾದ್ದೇನು? ಅಲ್ಲದೆ, ಅದು ಆಗಿ ಹೋಗಿ ಸುಮಾರು ಇಪ್ಪತ್ತು ನಾಲ್ಕು ಗಂಟೆಯಾಗಿ ಹೋಯ್ತು. ಅದೇನು ಚಿಂತೆ ಅಪ್ಪಣೆಯಾಗಲಿ ನಾನಿರುವಾಗ ಚಿಂತೆ ಬರೋಣ ಎಂದರೇನು?" ಎಂದು ಪ್ರಾರ್ಥಿಸಿದರು. ರಾಯರಿಗೆ ಕೊಂಚ ಕೋಪ ಬಂದಿದ್ದರೂ ಮನಸ್ಸು ತಿರುಗಿಸಿಕೊಂಡು,

" ಏನೂ ಇಲ್ಲರಿ. ನಥಿಂಗ್ ಐಸೆ! ಒಂದು ಕೂಲ್‌ಡ್ರಿಂಕ್ ತರಿಸಿ ಎಲ್ಲವೂ ಸರಿ ಹೋಗುತ್ತದೆ " ಎಂದರು.

ಇಲ್ಲಿ ಇಷ್ಟು ವಿಪ್ಲವವಾಗುವ ವೇಳೆಗೆ ಸರಿಯಾಗಿ ರಾಯರನ್ನು ನೋಡಲು ಯಾರೋ ಬಂದಿದ್ದಾರೆಯೆಂದು ಸುದ್ದಿಯು ಬಂದಿತು. "ಶಾನು ಭೋಗರಿರಬಹುದು. ಹೋಗಿಬರುವೆನೆಂದು ಹೇಳಲು ಬಂದಿರಬಹುದು" ಎಂದುಕೊಂಡು ಬರಹೇಳಿ ಕಳುಹಿಸಿದರು. ಆಗಂತುಕರು ಬಂದರು. ಕೋರ್ಟಿನಸಲ್ಲಿ ಸೋಫಾ ಹಾಕಿಸಿಕೊಂಡು ಸಿಗರೇಟ್ ಕೈಯಲ್ಲಿ ಹಿಡಿದು ಕೊಂಡು ಅನ್ಯ ಮನಸ್ಕರಾಗಿದ್ದ ರಾಯರು ಬಂದವರು ಯಾರು ಎಂಬದನ್ನು ಗಮನಿಸಲಿಲ್ಲ. ಅಷ್ಟು ಹೊತ್ತಿಗೆ, ಸಣ್ಣ ಟೇಬಲ್ಲೂ ಡ್ರಿಂಕ್ಸ್‌ಗಳೂ ಬಂದುವು. " ಬಾಯ್ " ಬಂದು ಎಲ್ಲವನ್ನೂ ಇಟ್ಟು ಹೊರಟುಹೋದನು. ರಾಯನು ಇನ್ನೂ ಬಂದವರು ಯಾರು ಎಂಬುದನ್ನು ನೋಡಲಿಲ್ಲ.

ಬಂದವರು ಕಂಠೀಮಾವ. ಕ್ಲಬ್ ಮೆಂಬರುಗಳಿಗೆ ಯಾರಿಗೂ ಪರಿಚಯವಿಲ್ಲ. ಎಲ್ಲರೂ ಹೊಸಬರು ಬಂದಾಗ ಇರುವಂತೆ ಮೌನದಿಂದಿದ್ದರು. ಅಲ್ಲದೆ, ಕಂಠೀಮಾವ ಬಂದು ಎದುರಿಗೆ ನಿಂತರೆ, ತಲೆ ಹರಟೆ ಮಾತಾಡುವ ಧೈರ್ಯವು ಅನೇಕರಿಗೆ ಉಳಿಯುತ್ತಿರಲಿಲ್ಲ. ಆ ಭವ್ಯಾಕೃತಿ ಯನ್ನು ನೋಡಿದರೆ ಎಂತಹವರಿಗೂ ಎದೆಯು ಜಗ್ಗೆನಿಸುವುದು. ಎತ್ತರ ವಾದ ದೇಹ, ವಿಶಾಲವಾದ ಎದೆ, ತುಂಬಿದ ಕತ್ತು, ಭಾರಿಯ ತಲೆ, ತಪ್ಪ ತೋಳು, ತಲೆಯ ಮೇಲೆ, ತೀಡಿ ತಿದ್ದಿ ಕಟ್ಟಿರುವ ದಪ್ಪ ರುಮಾಲು, ಕೈಯಲ್ಲಿ ಆ ತೋಳಿಗೆ ತಕ್ಕಂತಿರುವ ಅಂಕೋಲೆಯ ಕರಿಯ ದೊಣ್ಣೆ, ಅಳ್ಳೆದೆಯವರು ಮುಸುಕಿನಲ್ಲಿ ಕಂಡರೆ, ಮರುದಿವಸ ಹನುಮಂತರಾಯನ ಗುಡಿಗೆ ಚೀಟು ಕಟ್ಟಿಸಿಕೊಳ್ಳಲು ಹೋಗಬೇಕು. ಅಂತಹ ಭಾರಿಯ ಭವ್ಯಾಕೃತಿ.

ರಾಯರು ಎದುರು ಕಡೆಯಿಂದ ಮಾತು ಬರುವುದೆಂದಿದ್ದವರು. ಒಂದು ಗಳಿಗೆಯಾದರೂ ತಾವು ನಿರೀಕ್ಷಿಸಿದಂತೆ ಮಾತು ಬರದಿರಲು, " ಏನು ಶಾನುಭೋಗರೆ! " ಎಂದು ತಿರುಗಿದರು. ನೋಡುತ್ತಾರೆ ಕಂಠೀ

ಮಾವ. ಅವರಿಗೆ ಗುರುತು ಸಿಕ್ಕಿತು. ಕೈಯ್ಯ ಸಿಗರೇಟು ಹಾಗೇ ಕಳಚಿ ಕೊಂಡಿತು. ತಟ್ಟನೆ ಮೇಲೆದ್ದರು. " ಬನ್ನಿ ಕುಳಿತುಕೊಳ್ಳಿ. " ಎಂದರು.

ಶ್ರೀಕಂಠಯ್ಯನವರು ತಮಗೆ ಸರಿಯಾದ ಗೌರವದ ರೀತಿಯಲ್ಲಿ ರಾಯನು ನಡೆದುಕೊಳ್ಳಲಿಲ್ಲವೆಂದು ಕೊಂಚ ಅಸಮಾಧಾನಗೊಂಡರು. ಅವನ " ಬನ್ನಿ ಕುಳಿತುಕೊಳ್ಳಿ " ತಮ್ಮ ಗೌರವವನ್ನು ಕೀಳುಗಳೆಯಿ ತೆಂದು ಅವರ ಮನಸ್ಸಿಗೆ ಕೊಂಚ ನೋವಾಯಿತು. ಈ ಸ್ಥಿತಿಯಲ್ಲಿ ಅವರ ಮನಸ್ಸು ಸೆಡೆದುಕೊಳ್ಳುತ್ತಿದ್ದ ಹಾಗೆ ರಾಯನು ಹಿಂತಿರುಗಿ ನೋಡಿದನು. ಬಂದವರು ಯಾರು ? ಏನು ಎಂಬುದು, ಆಗ ಅವನಿಗೆ ಅರ್ಥವಾಯಿತು. ಅವರನ್ನು ಅಲ್ಲಿ ಕಾಣುವದು ಅವನಿಗೆ ಬೇಕಿರಲಿಲ್ಲ. ತನ್ನ ಸರಿಯುವರ ಜೊತೆಯಲ್ಲಿ ತನಗೆ ತೋರಿದ ಹಾಗೆ ಕುಣಿಯುವದಕ್ಕಾಗಿ ಮಾಡಿಕೊಂಡಿದ್ದ ತನ್ನ ' ಕ್ಲಬ್ಬಿ 'ನಲ್ಲಿ ದೊಡ್ಡವರು ಎಂದು ಗಣ್ಯರಾದವರೊಬ್ಬರು ಬಂದು ತನ್ನನ್ನು ನೋಡುವದು ಅವನಿಗೆ ಸಮ್ಮತವಿಲ್ಲ. ಮೊದಲೇ ಕದಡಿದ್ದ ಮನಸ್ಸು, ಮೇಲೆ ಬೇಡವಾದ ಕೆಲಸವು ನಡೆದಿರುವಾಗ ಇರುವ ಒಗರು ಎರಡೂ ಸೇರಿ ರಾಯನ ಮನಸ್ಸು ಇನ್ನೂ ಕಲುಷಿತವೂ ಜಡವೂ ಆಯಿತು.

ರಾಯನ ಮನಸ್ಸು ಎಂದಿನಂತೆ ಇದ್ದಿದ್ದಾದರೆ ಅವನು ಅವರನ್ನು ಕರೆದುಕೊಂಡು ಮನೆಗೆ ಹೊರಟು ಹೋಗುತ್ತಿದ್ದನು. ಆದರೆ ಇಂದು ಹೃದಯವು ಸೀಸದ ಕವಚವನ್ನು ತೊಟ್ಟುಕೊಂಡಂತೆ ಭಾರವಾಗಿರಲು ಏನು ಮಾಡಬೇಕೆಂಬುದು ತೋರಲಿಲ್ಲ. ಆದರೆ ಸುಮ್ಮನಿರುವದೆಂತು ? ಅದಕ್ಕಾಗಿ ಸಾಧ್ಯವಾದ ಮಟ್ಟಿಗೂ ವಿನಯವನ್ನು ಅವಲಂಬಿಸಿ " ಏನು ದಯಮಾಡಿ ಸಿದಿರಿ ? " ಅಂದರು. ಶ್ರೀಕಂಠಯ್ಯನವರ ಮನಸ್ಸಿಗೆ ಆ ಪ್ರಶ್ನೆಯಲ್ಲಿ ಒಂದು ವಿಕಟತನದ ವಿಡಂಬನೆಯು ತೋರಿತು. "ತಾವು ಬಂದಿರುವ ಕೆಲಸವು ಆತನಿಗೆ ಅತಿ ಪ್ರಿಯವಾದುದು. ಆದರಿಂದ ತಮಗೆ ಬಹಳ ಪ್ರಶಸ್ತಿಯು ದೊರಕಬಹುದು" ಎಂದು ತಿಳಿದುಕೊಂಡಿದ್ದರಾಗಿ ಈ ರೀತಿಯ ಬಣ ಪ್ರಶ್ನೆಗೆ ಸಿದ್ಧರಾಗಿರಲಿಲ್ಲ. ಅಲ್ಲದೆ ಹೋದಲ್ಲೆಲ್ಲ ತಮ್ಮ ಅಧಿಕಾರ ದರ್ಪವನ್ನು ತೋರಿಸುವ ಜಾತಿಗೆ ಸೇರಿದವರು ಅವರು. ಅದರಿಂದ ಎಂದಿನಂತೆ ' ನಿಮ್ಮ

ಕೆಲಸಕ್ಕೋಸ್ಕರಲೇ ಬಂದದ್ದು ' ಎಂದರು. ಮಾತು ಗಡುಸಾಗಿತ್ತು.
" ತಾವು ದೊಡ್ಡವರು. ಇತರರು ಹುಡುಗರು ಅವರಿಗೆ ಮಾತ್ರ ನಿಯಾಮಕರು " ಎಂಬ ಭಾವವು ಆ ಮಾತಿನಲ್ಲಿತ್ತು.

ರಾಯನಿಗೆ ಅರ್ಥವಾಗಲಿಲ್ಲ. ಅಥವಾ ಅವನ ಮನಸ್ಸು ಅರ್ಥ ಮಾಡಿಕೊಳ್ಳುವ ಸ್ಥಿತಿಯಲ್ಲಿರಲಿಲ್ಲ. ಆದರೂ ಮನಸ್ಸು ಮಾತಿಗಿಂತಲೂ ಮಾತಿನ ಭಾವವನ್ನು ಚೆನ್ನಾಗಿ ಗ್ರಹಿಸಿ ತಾನೂ ಅಷ್ಟೇ ಸೆಡೆದು ನಿಂತುಕೊಂಡು " ತಮ್ಮನ್ನು ಇಲ್ಲಿಗೆ ಬರಮಾಡಿರುವ ನಮ್ಮ ಕೆಲಸವಾವದು ?" ಎಂದನು. ಶ್ರೀಕಂಠಯ್ಯನವರು ಮುಳ್ಳಿನಿಂದ ತಿವಿಸಿಕೊಂಡ ಕುದುರೆಯಂತೆ ನೆಗೆದು 'ಏನಯ್ಯ ಇದನ್ಯಾಯ ! ನಾನು ಯಾರು ಎಂಬುದನ್ನು ತಿಳಿದು ನಾನು ಏಕೆ ಬಂದೆನೆಂಬ ಅರಿವ ಶಕ್ತಿ ನಿನಗೆ ಇದ್ದೂ ಹೀಗೇ? ಬಹಳ ಚೆನ್ನಾಯಿತು, ಇನ್ನೆಷ್ಟು ದಿನ ಆ ಹುಡುಗಿಯನ್ನು ಗೋಳು ಹುಯ್ದು ಕೊಳ್ಳಬೇಕೆಂದಿರುವೆ. ಗಿಣಿಯನ್ನು ತಂದು ಬೆಕ್ಕಿನ ಕೈಗೆ ಕೊಟ್ಟ ಹಾಗಾಯಿತಲ್ಲ ! ಇದು ನಿನಗೆ ತರವಲ್ಲ. ಒಳ್ಳೇ ಮಾತಿನಲ್ಲಿ ಈಗಲೆ ಹೊರಟು ಬಿಡು. ಇಲ್ಲವಾದರೆ ಬಹಳ ಅನರ್ಥವಾದೀತು ' ಅಂದರು.

ರಾಯನಿಗೆ ಅವರು ಬಂದ ಕೆಲಸವೇನೋ ಅರ್ಥವಾಯಿತು. ಆದರೆ ಅದನ್ನು ತಿಳಿಸಿಕೊಟ್ಟ ರೀತಿಯು ಮಾತ್ರ ಬಹಳ ಬೇಸರಿಕೆಗೆ ಕಾರಣವಾಯಿತು. ಆ ಕೆಲಸವನ್ನು ಮಾಡಬೇಕೆಂದು ಮನಸ್ಸು ಹಾತೊರೆಯುತ್ತಿದ್ದ ವೇಳೆಯಲ್ಲೂ ಕೂಡ ಬೇಡವೆಂದು ಜಿಗುಪ್ಸೆಯನ್ನು ಹುಟ್ಟಿಸುವ ಮಟ್ಟಿನ ಬೇಸರವಾಯಿತು. ಆ ಬೇಸರದ ಜೊತೆಗೆ ತನ್ನ ಸಹಪಾಠಿಗಳಲ್ಲಿ ತನಗೆ ಅವಮಾನವಾಯಿತೆಂಬ ಭಾರವೊಂದು, ತನ್ನ ಮನೆಯ ಸುದ್ದಿಯನ್ನು ಪೇದಿಯವರೆದುರಿಗೆ ಬಿಚ್ಚಿಟ್ಟನಲ್ಲ ಎಂಬ ಕ್ರೋಧವೊಂದು, ಸೇರಿತು. ಆದರೂ ಅದನ್ನೆಲ್ಲ ನುಂಗಿಕೊಂಡು " ನನ್ನ ಕಾರ್ಯಗಳಿಗೆ ಸ್ವಾಮಿಯು ನಾನು. ತಾವು ಆಯಾಸವನ್ನು ವಹಿಸಬೇಕಾಗಿಲ್ಲ ' ಎಂದನು.

ಶ್ರೀಕಂಠಯ್ಯನವರಿಗೆ ಇನ್ನೂ ರೇಗಿತು. ತಮ್ಮ ಎದುರು ಇರುವ ಜನರು ತಮಗಿಂತಲೂ ಸಣ್ಣ ವಯಸ್ಸಿನವರು. ಅವರನ್ನು ಪಂಚಾಯತಿಗೆ

ಕರೆವುದು ತರವಲ್ಲ ಎಂಬುದೂ ಕೂಡ ಅವರ ಮನಸ್ಸಿಗೆ ತೋರಲಿಲ್ಲ. "ನೋಡಿರಯ್ಯಾ! ಈತ ಮಾಡಿರುವ ಕೆಲಸ ಸರಿಯೇನೋ ನೀವಾದರೂ ಬುದ್ಧಿ ಹೇಳಿರಿ. ಆ ಹೆಣ್ಣು ಕೊರಕೊರಗಿ ಆನೆಕಲ್ಲಿನ ಹಾಗೆ ಕರಗಿ ಹೋಗುತ್ತಿದೆ. ಆ ತಂದೆತಾಯಿಗಳು ಇದೇ ದುಃಖದಿಂದ ಕಡ್ಡಿಯಾಗಿ ಹೋಗಿದ್ದಾರೆ. ಅವರಿಗೆ ಬೇರೆ ಮಕ್ಕಳೂ ಇಲ್ಲ. ಗೌರೀದೇವಿಯ ಹಾಗೆ ಇರುವ ಆ ಹುಡುಗಿಯನ್ನು ಪ್ರಸ್ತ ಮಾಡಿಕೊಂಡು, ತಂದು ಮನೆಯಲ್ಲಿರಿಸಿಕೊಂಡು ಸುಖವಾಗಿರುವುದಕ್ಕೆ ಏನು ಗುಲುಗು ಈತನಿಗೆ? ನೀವಾದರೂ ಬುದ್ಧಿ ಹೇಳಿರಿ" ಎಂದರು.

ರಾಯನು ಅದುವರೆಗೆ ಈ ಜಾತಿಯ ಪರಿಭವವನ್ನು ಅನುಭವಿಸಿದವನಲ್ಲ. ಲೋಭದಿಂದ ತನ್ನನ್ನು ಆರಾಧಿಸುತ್ತಿದ್ದ ಭಕ್ತವೃಂದದಲ್ಲಿ ತಾನೇ ಪರಮೇಶ್ವರ ಭಟ್ಟಾರಕನಾಗಿ ಪ್ರಸಾದವನ್ನು ಹಂಚಿ ನಲಿಯುತ್ತಿದ್ದವನು ಅವನಿಗೆ ಇಂದು ಸಹಿಸಲಸಾಧ್ಯವಾದ ಆಘಾತವಾಯಿತು. ತನ್ನ ಮಾನದ ರತ್ನ ಮುಕುರಕ್ಕೆ ಅಪಮಾನದ ಕೊಡತಿಯು ಪೆಟ್ಟು ಬಿದ್ದು ಅದು ಒಡೆದು ಚೂರು ಚೂರಾದಂತಾಯಿತು. ಅವನಿಗೆ ಸಾಧ್ಯವಾಗಿದ್ದರೆ ಆ ಎದುರಾಳಿಯನ್ನು ಪಿಸ್ತೂಲಿನಿಂದ ಒಂದೇ ಸವನಾಗಿ ಹೊಡೆದು ಹೊಡೆದು ಹೊಡೆದು ಬಿಡಬೇಕು. 'ಮೆಶೀನ್‌ಗನ್ನು' ಇದ್ದಿದ್ದರೆ ಒಂದೇ ನಿಮಿಷದಲ್ಲಿ ಚೂರು ಚೂರು ಮಾಡಿ ದಿಕ್ಕು ದಿಕ್ಕುಗಳಿಗೆ ಎಸೆದು ಬಿಡಬೇಕು, ಎನ್ನುವಷ್ಟು ಕೋಪವು ಬಂತು. ಹಾಗೆಯೇ ಅದನ್ನು ತಡೆದುಕೊಂಡು, ಎದುರಿಗೆ ಟೇಬಲ್ಲಿನ ಮೇಲಿದ್ದ 'ಪೈನಾಪಲ್' ತೆಗೆದುಕೊಂಡು ಕುಡಿಯುವದಕ್ಕೆ ಹೋದನು. ಮಾತನಾಡುವದಕ್ಕೆ ಬಾಯಿಯಲ್ಲಿ ದ್ರವವಿರಲಿಲ್ಲ, ಒಣಗಿ ಹೋಗಿತ್ತು. ಅಂಟು ಕಟ್ಟಿ ಗಂಟಲಿನಿಂದ ಮಾತು ಹೊರಬೀಳದಷ್ಟು ಕೋಪವೇರಿತ್ತು.

ಶ್ರೀಕಂಠಯ್ಯನವರು ಇಲ್ಲಿಯೂ ಪೆಚ್ಚು ಬಿದ್ದರು. ತಪ್ಪಿದರು. ರಾಯನ ಭಾವವನ್ನು ಅಪಾರ್ಥ ಮಾಡಿಕೊಂಡು ಅವನು ತಮ್ಮ ವಾಕ್ಘೋರಣೆಗೆ ಹೆದರಿದನೆಂದು ಭಾವಿಸಿ, ತಾವು ಬಂದ ಕೆಲಸವನ್ನು ಸಾಧ

ಸುವ ಉಪಾಯವು ಇದೇ ಎಂದುಕೊಂಡು ಅದೇ ಧೋರಣೆಯಿಂದ ಮುಂದೆ ನುಗ್ಗಿ "ಇದೋ ಈ ಪಟವನ್ನಾದರೂ ನೋಡಯ್ಯ ಇಂಥ ಹೆಂಡತಿಯ ಕೈ ಹಿಡಿಯಬೇಕಾದರೆ ಭಾಗ್ಯವಿರಬೇಡವೆ!" ಎಂದು ತಾವು ತಂದಿದ್ದ ಚಿತ್ರ ಪಟವೊಂದನ್ನು ರಾಯನ ಮುಂದೆ ಮೇಜಿನ ಮೇಲೆ ಇಟ್ಟರು. ರಾಯನಿಗೆ ಕೋಪವು ಮಿತಿಮೀರಿ ಹೋಯಿತು. ತಾನು ಏನು ಮಾಡುತ್ತಿದ್ದಾನೆ ಎಂಬುದರ ಅರಿವೂ ಇಲ್ಲದಲೇ ತಾನು ಅರೆ ಕುಡಿದಿದ್ದ ಆ ಕೆಂಪು ನೀರನ್ನು ತಗೆದು ಶ್ರೀಕಂಠಯ್ಯನ ಮುಖದ ಮೇಲೆ ಎಸೆದನು. ಆ ಎಸೆದ ಬಟ್ಟಲು ಹೋಗಿ ಅವರನ್ನು ತಾಕುವದಕ್ಕಿಂತ ಮುಂಚೆಯೆ 'You fool! go your way' ಎಂಬ ಮಾತುಗಳು ಆನೆಯ ಗಾತ್ರವಾಗಿ, ಸೂಜಿಯ ಮೊನೆಗಿಂತ ಚೂಪಾಗಿ ಹೋಗಿ ಅವರ ಕರ್ಣಕುಹರವನ್ನು ತಾಕಿದುವು. ಆಡಿದ ಮಾತನ್ನು ಕೇಳಿ, ನಡೆದದ್ದನ್ನು ನೋಡಿ, ಇದೇನಾಯಿತು ಎಂಬುದರ ಅರ್ಥ ಮಾಡಿ ಕೊಳ್ಳುವುದರೊಳಗಾಗಿ, ಆ ಬಟ್ಟಲದಲ್ಲಿದ್ದ ಕೆಂಪು ನೀರು ಬಂದು ಇವರ ಮುಖದ ಮೇಲೆ ಬಿದ್ದುಹೋಯಿತು. ಮುಖವೆಲ್ಲ ಕೆಂಪು ನೀರಿನಿಂದ ಸಾರಿಸಿದಂತಾಗಿ ರಂಗು ಮುಕ್ಕಳಿಸಿದರೂ ಅಪಮಾನದಿಂದ ಆದ ಕಪ್ಪು ಆ ರಂಗನ್ನೆಲ್ಲ ನುಂಗಿ ತಾನೇ ತಾನಾಯಿತು.

ಶ್ರೀಕಂಠಯ್ಯನವರು ಏನು ಮಾಡಬೇಕೆಂಬುದು ತೋರದವರಾದರು. ಇದುವರೆಗೆ ಇಂತಹ ಪರಿಸ್ಥಿತಿಯನ್ನು ಅವರು ಜನ್ಮದಲ್ಲಿಯೇ ಪಡೆದಿರಲಿಲ್ಲ. ಎಲ್ಲಿ ಹೋದರೂ ತಮ್ಮ ಮಾತು ಮೇಲು, ತಮ್ಮ ಕೈ ಮೇಲು, ಎಂದು ಹೆಮ್ಮೆ ಕೊಚ್ಚಿಕೊಳ್ಳುತ್ತಿದ್ದ ಪ್ರಾಣಿಗೆ ಇಂದು ಈ ರೀತಿಯಾದ ಅಪಮಾನ. ಹಾಗೂ ಮತ್ತೆ ಮಾತನಾಡಲಾರಂಭಿಸಿದರು ಅಥವಾ ಪ್ರಯತ್ನಪಟ್ಟರು. ಬಟ್ಟೆಯಿಂದ ಮುಖವನ್ನೊರಿಸಿಕೊಂಡು ಕಂಠದ ನರಗಳೆಲ್ಲ ಬಿಗಿಯುತ್ತಿರಲು, ಕಣ್ಣು ಕೆಂಪಾಗಿ ಮನಸ್ಸಿನ ಕ್ರೋಧವನ್ನು ಬೀರುತ್ತಿರಲು, 'ಏನೋ ಹುಡುಗ ರಾಯ....' ಎಂದು ಆರಂಭಿಸಿದರು.

ಅಷ್ಟರೊಳಗಾಗಿ ಕೆಳಗೆ ಬಿದ್ದು ಒಡೆದ ಗಾಜಿನ ಬಟ್ಟಲ ಸಪ್ಪಳನ್ನು ಕೇಳಿ ಬಂದ 'ಬಾಯ್'ಯು ಶ್ರೀಕಂಠಯ್ಯನವರ ಮುಖವನ್ನು

ಕಂಡು ಪಕಪಕನೆ ನಕ್ಕುಬಿಟ್ಟನು. ಅಲ್ಲಲ್ಲಿ ಸುತ್ತುಮುತ್ತಿನವರಿಂದ ಲೇ ಲೇ ಎಂದು ನಿರೋಧ ಪ್ರಯತ್ನವೇನೋ ನಡೆಯಿತು. ಆದರೆ ಆ ಪ್ರಯತ್ನ ಗಳೆಲ್ಲವೂ ವ್ಯರ್ಥವಾಗಿ ಅದುವರೆಗೂ ತಡೆದಿದ್ದ ನಗೆಯು ಹೊರಳಿ ತಾನೇ ತಾನಾಯಿತು. ಎಲ್ಲರೂ ಘೊಳ್ಳನೇ ನಕ್ಕುಬಿಟ್ಟರು.

ಶ್ರೀಕಂಠಯ್ಯನವರು ಅಲ್ಲಿ ನಿಲ್ಲಲಿಲ್ಲ. ಶುದ್ಧ ಅವಿವೇಕವಾಯಿತು, ಎಂದು ಅಲ್ಲಿಂದ ಹೊರಟು ಹೋದರು.

ರಾಯನೂ ಅಲ್ಲಿ ಬಹಳ ಹೊತ್ತು ನಿಲ್ಲಲಿಲ್ಲ. ಅಲ್ಲಿ ಬಿದ್ದ ಹೆಂಡತಿಯ ಫೋಟೊ ತಗೆದುಕೊಂಡು ಸಮಾಜದ ಮಿತ್ರರ ಯಾರ ಕೈಯಲ್ಲೂ ಮಾತ ನಾಡದೆ ನಡೆದು ಬಿಟ್ಟನು.

* * * *

ಸುಮಾರು ರಾತ್ರಿ ಹನ್ನೊಂದು ಗಂಟೆ. ಅಥವಾ ಹನ್ನೆರಡಿರಬಹುದು. ನಾತಮ್ಮನವರ ಕೊಠಡಿಯಿಂದ ಕೊಠಡಿಯ ಕಡೆಯಿಂದ ಯಾರೋ ಮಾತ ನಾಡಿದ ಧ್ವನಿಯಾಗುತ್ತಿತ್ತು. ನಿದ್ದೆ ಬರದೆ ಹಾಸಿಗೆಯ ಮೇಲೆ ಹೊರಳಾ ಡುತ್ತಿರುವ ರಾಯನಿಗೆ ಆ ಚಿರಪರಿಚಿತವಾದ ಧ್ವನಿಯ ಗುರುತು ಸಿಕ್ಕಿದೆ. ತನ್ನ ಮೈಯನ್ನೆಲ್ಲಾ ಉರಿಸುತ್ತಿರುವ ಕ್ರೋಧ ದುಃಖಗಳನ್ನು ಒಮ್ಮೆಗೇ ಆರಿಸಿ ದೇಹಕ್ಕೆ ತಣಿಪನ್ನು ತಂದುಕೊಡುವ ವಾತ್ಸಲ್ಯವನ್ನು ಹಿರಿಯ ಹೊನಲಾಗಿ ಕೊಡುವ ಭರವಸೆಯು ಆ ಧ್ವನಿಯಲ್ಲಿ ತಾಂಡವವಾಡುತ್ತಿದೆ. ರಾಯನನ್ನು 'ಬಾ ಈ ವಾತ್ಸಲ್ಯದ ಹಿರಿಯ ಹೊನಲಿನಲ್ಲಿ ಒಮ್ಮೆ ಈಸಾಡು. ಜನ್ಮಾಂತರಗಳಿಂದ ಬಂದ ದುಃಖವೆಲ್ಲವೂ ತಳಿದು ಹೋಗುವುದು ಬಾ' ಎಂದು ಆ ಧ್ವನಿಯು ಕರೆಯುವಂತಿದೆ. ಆ ಧ್ವನಿಯು ಸ್ವಲ್ಪ ದುಃಖದಿಂದ ಭಾರವಾಗಿದೆ. ಆದರೂ ಅದು ಕೊಂಚ ಶ್ರುತಿ ಇಳಿದಿದ್ದರೂ ಸರಿಯಾಗಿಯೇ ನುಡಿಯುವಂತೆ ತೋರುವ ವೀಣೆಯ ತಂತಿಯಂತ ಮನೋಹರ ವಾಗಿಯೇ ಇದೆ.

ರಾಯನು ಆ ಧ್ವನಿಯನ್ನು ಕೇಳಿ, ಅಕ್ಷರಗಳು ಸ್ಫುಟವಾಗಿಲ್ಲ ದಿದ್ದರೂ, ಅರ್ಥವನ್ನು ಮಾಡಿಕೊಂಡನು. ಇನ್ನು ಬಹಳ ಹೊತ್ತು ಹಾಸಿಗೆ ಯಲ್ಲಿ ನಿಲ್ಲುವುದು ಸಾಧ್ಯವಾಗಲಿಲ್ಲ. ಎದ್ದುಬಿಟ್ಟನು. ಅವನಿಗೆ "ಹೋಗ

ಬೇಕು, ಏಕವ್ಮಾ? ಏನಾಯಿತಮ್ಮಾ?" ಎಂದು ಅಮ್ಮನನ್ನು ಸಂತವಿಸಬೇಕು. ಎನ್ನಿಸಿತು. ಆದರೆ ಅದೇನೋ ದಿಗಿಲು. ಏನೋ ಭಂಡಾರ ದ್ರೋಹ ಮಾಡಿದವನಂತೆ ಅಂಜಿಕೆ. ಹಾಗೂ ಹೀಗೂ ಕೊಂಚ ಹೊತ್ತು ಒದ್ದಾಡಿ ಮನಸ್ಸು ಅಲ್ಲಿಗೆ ಹೋಗಲೇಬೇಕೆಂದು ಇತ್ಯರ್ಥ ಮಾಡಿತು. ರಾಯನು ಬಟ್ಟೆಬರೆಗಳನ್ನು ಸರಿ ಮಾಡಿಕೊಂಡು ಅಲ್ಲಿಗೆ ಹೊರಟನು.

ಬಾಗಿಲಿಗೆ ಹೋಗುವುದರೊಳಗಾಗಿ ಅವನ ಧೈರ್ಯವೆಲ್ಲ ಪಲಾಯನ ಮಾಡಿಬಿಟ್ಟಿತು. ಅವನಿಗೆ ನಿಲ್ಲುವುದಕ್ಕೂ ಸಾಧ್ಯವಾಗಲಿಲ್ಲ. ಅಲ್ಲಿಯೇ ಕುಳಿತು ಬಿಟ್ಟನು. ಅವನು ಕೇಳಿದ ಮಾತುಗಳು ಅವನಲ್ಲಿದ್ದ ಶಕ್ತಿಯನ್ನೆಲ್ಲ ಅಪಹರಿಸಿಬಿಡಲು, ಬೆಂದ ಸೊಪ್ಪಾಗಿ, ಮುದುರಿಕೊಂಡಂತಾಗಿ, ಅಲ್ಲಿಯೇ ಕುಳಿತು ಬಿಟ್ಟನು. ಒಳಗಿಂದ ಇಬ್ಬರು ಆಡುವ ಮಾತುಗಳು ಸ್ಪಷ್ಟವಾಗಿ ಕೇಳಿಸುತ್ತಿದ್ದವು.

"ಅಲ್ಲಮ್ಮಾ! ಇವನ ಅವಿವೇಕದ ಆಸ್ತಿಗೆ ಆಸೆಪಟ್ಟು ನಾನು ಇವನನ್ನು ಸಾಕಿದೆನೇ? ನನಗೆ ನನ್ನ ಗಂಡನ ಆಸ್ತಿಯಿದೆಯೆಂಬುದೂ ಇವನ ಮನಸ್ಸಿಗೆ ಬರಲಿಲ್ಲವಲ್ಲ! ನೋಡಿದಿರಾ! ಸತ್ತು ಸ್ವರ್ಗದಲ್ಲಿರುವ ಆ ಮಹಾ ತಾಯಿಗೆ ಮಾತು ಕೊಟ್ಟುದಕ್ಕಾಗಿ ನಾನು ಇವನನ್ನು ಹೊಟ್ಟೆಯಲ್ಲಿ ಹುಟ್ಟಿದ ಮಗನಿಗಿಂತ ಹೆಚ್ಚು ಎಂದುಕೊಂಡು ಸಾಕಿದುದಕ್ಕೆ ಎಂತಹ ಫಲವಾಯಿತು ನೋಡಿದಿರಾ! ಹಾವು ಹಾಲೆರದ ಕೈಯನ್ನು ಮೊದಲು ಕಚ್ಚುವುದು ಎಂದ ಹಾಗಾಯಿತು. ಇಷ್ಟಕ್ಕೂ ನಾನು ಮಾಡಿದ ಅಪರಾಧವಾದರೂ ಏನು? ಮೈನೆರೆದು ನಿಂತಿರುವ ಹುಡುಗಿಯನ್ನು ಹಾಗೇ ಬಿಟ್ಟಿರುವುದು ನಿನ್ನಂತಹವರಿಗೆ ತರನಲ್ಲ. ನಮ್ಮ ಭಾಗಕ್ಕೆ ಬಂದ ಅಂಬಲಿಯೋ ತುಂಬೇ ಸೊಪ್ಪೋ ಯಾವುದೇ ಆಗಲಿ, ನಮ್ಮದು ಎಂದಮೇಲೆ ನಮ್ಮ ಬಳಿ ಇರಬೇಕು" ಎಂದು ಹೇಳಿದುದು ತಪ್ಪೆ? "ಮೂರು ಹೊತ್ತೂ ನಿನ್ನ ಕ್ಲಬ್ಬೂ ಕ್ಲಬ್ಬೂ ಎಂದು ಕುಳಿತಿರಬೇಡ. ಅಲ್ಲಿಗೆ ಬರುವವರೆಲ್ಲ ನಿನ್ನ ಹತ್ತಿರ ಕಿತ್ತು ತಿನ್ನುವುದಕ್ಕೆ ಬರುವವರು" ಎಂದುದು ತಪ್ಪೆ? ಇವನು ನಾನು ಯಾವ ಅಪರಾಧ ಮಾಡಿದೆನೆಂದು ನನಗೆ ಹೀಗೆ ಮಾಡಿದ? ನೋಡಿ. ನನಗೆ

ಒಂದು ಮನೆಯಂತೆ, ತಿಂಗಳಿಗೆ ಹದಿನೈದು ರೂಪಾಯಿಯಂತೆ ನನ್ನನ್ನು ಇವನು ಎಲ್ಲಿಯೂ ಇವರ ಮನೆ ಸೇರಿ ಬದುಕುವುದಕ್ಕೆ ಬಂದ ಕೂಲಿಯವಳು ಎಂದುಕೊಂಡ ಹಾಗಿದೆ. ಯಾರಿಗೆ ಬೇಕವ್ಮಾ? ಈ ಆಸ್ತಿಪಾಸ್ತಿಯೆಲ್ಲವನ್ನೂ ನಾಳೆಯೇ ಅವನಿಗೆ ವಹಿಸಿ ಬಿಟ್ಟು ನಾನು ಹೊರಟು ಬಿಡುತ್ತೇನೆ. ನಾನು ಒಂದು ಗಳಿಗೆ ಇರಲಾರೆನಮ್ಮಾ ''

ಇನ್ನೊಬ್ಬಾಕೆಯು ಸಮಾಧಾನ ಹೇಳಿದಳು. ಆದರೆ, ಆ ಸಮಾಧಾನವು ಸಮಾಧಾನವನ್ನು ತರಲಿಲ್ಲ. ಮತ್ತೊ ಒಮ್ಮೆ ಮೊದಲು ಮಾತನಾಡಿದಾಕೆಯು, ಒಂದು ಗಳಿಗೆ ಬಿಟ್ಟು, ಇನ್ನೂ ನಿರ್ಧರವಾದ ಸಿದ್ಧಾಂತವನ್ನು ಸೂಚಿಸುವ ಗಂಭೀರ ಧ್ವನಿಯಿಂದ ಮಾತನಾಡಿದಳು :

"ಯಾವೊತ್ತಿದ್ದರೂ ಆಗುವುದಿಷ್ಟೇ ಎನ್ನುವುದೂ ತಿಳಿದಿತ್ತು. ಇವನೂ ವಿಹಿತವಾಗಿದ್ದು ಹೆಂಡತಿ ಮಕ್ಕಳೊಡನೆ ಸಂಸಾರ ಮಾಡುತ್ತಿರುವುದು ನೋಡಿ, ಹೊರಟು ಹೋಗೋಣ ಎಂದುಕೊಂಡಿದ್ದೆ. ಈಗ ತಾನೇ ಏನು? ಒಂದು ಹತ್ತು ವರುಷ ಮೊದಲೇ ಹೊರಟಹಾಗಾಯಿತು. ಕಾಶಿಗೆ ಹೋಗುತ್ತೇನೆ. ಅಲ್ಲಿ ಅನಾಥ ಬಾಂಧವ ವಿಶ್ವನಾಥನಿದ್ದೇ ಇದ್ದಾನೆ. ಈ ಗೂಡಿನಲ್ಲಿ ಉಸಿರು ಇರುವವರೆಗೂ ಹೇಗೊ ಕಾಲ ಕಳೆದು, ಕೊನೆಗಾಲ ಬಂದಾಗ ಗಂಗಾ ತೀರದಲ್ಲಿ ಮಲಗಿಬಿಟ್ಟರೆ ಆಯಿತು. ಯಾರಾದರೂ ಪುಣ್ಯಾತ್ಮರು ಅತ್ತಕಡೆ ಎಳೆದು ಹಾಕುತ್ತಾರೆ. ಒಂದು ವೇಳೆ ಅದೂ ಹಣೆಯಲ್ಲಿ ಬರೆದಿಲ್ಲವೆನ್ನಿ. ಬೇಡ, ಹಾಳು ದೇಹವನ್ನು ನಾಯಿ ನರಿ ಎಳೆದು ಹಾಕಲೇಳಿ. ಅದಕ್ಕೇನು? ಇಲ್ಲಿ ಬದುಕಿದ್ದು ಇವರ ಕೈಲಿ ಎಳೆಸಿಕೊಳ್ಳುವುದಕ್ಕಿಂತ ಕಾಶಿಯಲ್ಲಿ ಸತ್ತು ನಾಯಿ ನರಿ ಕೈಲಿ ಎಳೆಸಿಕೊಳ್ಳುವುದು ಉತ್ತಮವಲ್ಲವೇ?''

ರಾಯನು ಎಲ್ಲವನ್ನೂ ಕೇಳಿದನು. ಅವನಿಗೆ ಮೊದಲೇ ಎದೆ ಜಗ್ಗೆಂದಿತ್ತು. ಈಗ ಆ ಎದೆಯು ಇದ್ದ ಎಡೆಯಿಂದ ಕದಲಿ ಕಾಲಿಗೆ ಇಳಿದು ಬಂದಂತೆ ಆಗಿಹೋಯಿತು. ಕಾವೇರಮ್ಮನವರು ಒಂದು ಮಾತು ಎರಡು ತುಂಡು ಎನ್ನುವ ಜಾತಿಯವರು ಎಂಬುದನ್ನು ಅವನು ಬಲ್ಲವನು. ನುಮಾರು

ಹತ್ತು ಸಾವಿರ ರೂಪಾಯಿ ವರಮಾನದ ಆಸ್ತಿಯನ್ನು ವಿಚಕ್ಷಣವಾಗಿ ವಿವೇಕವಾಗಿ ಆಳಿಕೊಂಡು ಹೋಗುತ್ತಿದ್ದವಳು. ಹತ್ತು ವರುಷಗಳಲ್ಲಿ ಮನೆಯ ಗೌರವಕ್ಕೆ ತಕ್ಕಂತೆ ಮನವಾರ್ತೆಯನ್ನು ನಡೆಸಿ ನಲವತ್ತು ಸಾವಿರ ರೂಪಾಯಿಗಳನ್ನು ಕೂಡಿಟ್ಟವಳು ಎಂಬುದು ರಾಯನ ಮನಸ್ಸಿಗೆ ಬಂದಿತ್ತು. ತಾನು ಈಚೆಗೆ ಎರಡು ವರ್ಷಗಳಿಂದ ಅನೇಕ ಸಲ "ಆಸ್ತಿಯ ಆಡಳಿತವನ್ನು ತನ್ನ ಕೈಗೆ ತೆಗೆದುಕೊಂಡು ಬಿಡಬೇಕು" ಎಂದುಕೊಂಡಿದ್ದನು ನಿಜ. ಆದರೆ ಆಕೆಯು ತಾನಾಗಿ ವಹಿಸಲು ಸಿದ್ಧಳಾಗಿರುವಳು ಎಂಬುದನ್ನು ಕೇಳಿ, ರಾಯನಿಗೆ ಪಂಚಪ್ರಾಣಗಳು ಒಂದೇಸಲ ದೇಹವನ್ನು ಬಿಟ್ಟು ಹೋಗಲು ಸಿದ್ಧವಾದಂತೆ ಆಯಿತು.

ಹೀಗೆ ಏನು ಮಾಡುವುದಕ್ಕೂ ತೋರದೆ, ಗಾಬರಿಯಿಂದ ಮುಗ್ಧನಾದ ರಾಯನನ್ನು ಅನಿರ್ದಿಷ್ಟವಾದ ಅಂಜಿಕೆಯೊಂದು ಮೋಡವನ್ನು ಹಾರಿಸಿಕೊಂಡು ಹೋಗುವ ಗಾಳಿಯಂತೆ ಹೊತ್ತು ತಂದು ಅವನ ಕೊಠಡಿಗೆ ತಳ್ಳಿಬಿಟ್ಟಿತು. ರಾಯನಿಗೆ ಏನಾಯಿತೋ ಏನೋ ಬಹಳ ದುಃಖವು ಬಂದಿತು. ಅಕಾರ್ಯಕಾರಿಯಾದೆನೆಂಬ ಪಶ್ಚಾತ್ತಾಪವು ಮೂಡಿತು. ತಾಯಿಗೆ ತಾಯಾಗಿ ಮಡಲಲ್ಲಿಟ್ಟು ತನ್ನನ್ನು ಕಾಪಾಡಿ, ತಂದೆಗೆ ತಂದೆಯಾಗಿ ತನ್ನ ಆಸ್ತಿಯೆಲ್ಲವನ್ನು ಕೂಡಿಸಿಕೊಟ್ಟ ತನ್ನ ಭಾಗದ ಭಾಗ್ಯಲಕ್ಷ್ಮಿಯನ್ನು ತನ್ನ ಅವಿವೇಕದಿಂದು ಹೊರದೂಡುವುದೆಂದು ರಾಯನು ಅಂಜಿದನು. ತಾನು ನಿತ್ಯವೂ ಪೂಜಿಸಬೇಕಾಗಿದ್ದ ಮಾತೃದೇವಿಯನ್ನು ಇಂದು ದಾದಿಗಿಂತ ಕಡೆಯಾಗಿ ಭಾವಿಸಿದ ಪರಮಪಾತಕಿಯು ತಾನಾದೆನೆಂದು ಅವನು ತನ್ನನ್ನು ನಿಂದಿಸಿಕೊಂಡನು. ಪರಿಪರಿಯಾಗಿ ತಿರಸ್ಕರಿಸಿಕೊಂಡನು. ಬಗೆಬಗೆಯಾಗಿ ಬಯ್ದುಕೊಂಡನು. ಏನು ಮಾಡಿದರೂ ಸಮಾಧಾನವಾಗಲಿಲ್ಲ. ರಾಯನ ಹಾಸಿಗೆಗೂ ದಿಂಬಿಗೂ ಬಾಯಿದ್ದು, ಅವು ಆ ರಾಯನು ಪಟ್ಟ ಸಂಕಟವನ್ನು, ಬಿದ್ದು ಬಿದ್ದು ಹೊರಳಿದ ಪರಿಯನ್ನು ಕಾವೇರಮ್ಮನವರಿಗೆ ಅರುಹಿದ್ದರೆ, ಅವರ ಕೋಪವು ನಿರ್ನಾಮವಾಗುತ್ತಿತ್ತು! ಅವರ ಚಿತ್ತಕ್ಕೆ ಶಾಂತಿಯು ಬಂದು, ಆ ಕ್ರೋಧಾಗ್ನಿಯು

ಹುಯ್ಯಲಿಗೆ ಸಿಕ್ಕಿ ಬೆಂದು ಬೇಗಾಡಾಗಿದ್ದ ಆಕೆಯ ಹೃದಯದಲ್ಲಿ ಮತ್ತೆ ವಾತ್ಸಲ್ಯದ ಮಂದಾಕಿನಿಯು ಮೂಡಿ, ಅದೆಲ್ಲವೂ ನಂದನ ವನವಾಗಿ, ಎಳೆಯ ಕಂದಮ್ಮನನ್ನು ತಬ್ಬಿಕೊಳ್ಳುವ ಎಳೆಯ ವಯಸ್ಸಿನ ತಾಯಂತೆ ರಾಯನನ್ನು ಅಪ್ಪಿಕೊಳ್ಳುತ್ತಿದ್ದರು.

---

## ಮುಂಬೆಳಗು

ಬೆಳಗಾಗುತ್ತ ಬಂದಿತು. ರಾಯನು "ಅಮ್ಮನು ಎಂದಿನಂತೆ ಕಾಫಿಯನ್ನು ತರುವಳು. ಆಗ ಕಾಲು ಕಟ್ಟಿಕೊಂಡು, 'ಅಮ್ಮಾ! ತಪ್ಪಾಯಿತು. ಇನ್ನು ಮೇಲೆ ನೀನು ಹೇಳಿದಂತೆ ಕೇಳಿಕೊಂಡಿರುವೆನಮ್ಮಾ!' ಎಂದು ಅಂಗಲಾಚಿಕೊಂಡರಾಯಿತು. ಅಮ್ಮನ ಮನಸ್ಸು ಬೆಣ್ಣೆಯಂತೆ ಮೃದು. ಕರಗಿ ಹೋಗುವುದು" ಎಂದು ಯೋಚಿಸಿಕೊಂಡು, 'ಆ ಮಾತು ಹೀಗೆ ಹೇಳುವುದು ಈ ಮಾತು ಹಾಗೆ ಹೇಳುವುದು' ಎಂದುಕೊಂಡು, ತನ್ನ ಗೆಲುವನ್ನೇ ಯೋಚಿಸಿಕೊಂಡು ಹಾಸುಗೆಯಲ್ಲಿ ಹೊರಳುತ್ತಿದ್ದನು.

ಹಾಗೂ ಹೀಗೂ ಬೆಳಗಾಯಿತು. ಗಡಿಯಾರವು ಮೂರು ಘಂಟೆ ಹೊಡೆದುದು ಮೊದಲು ರಾಯನು, ಮೂರಾಯಿತು, ಮೂರುವರೆಯಾಯಿತು, ನಾಲ್ಕಾಯಿತು, ನಾಲ್ಕುವರೆಯಾಯಿತು, ಐದಾಯ್ತು, ಎಂದು ಲೆಕ್ಕ ಮಾಡಿಕೊಳ್ಳುತ್ತ ಕುಳಿತಿದ್ದನು. ಐದೂವರೆ ಗಂಟೆಯು ಹೊಡೆದುದೂ ಕೇಳಿಸಿತ್ತು. ಅಷ್ಟು ಹೊತ್ತೂ ಇವನು ಹುಡುಕಿದರೂ ಬರದಿದ್ದ ನಿದ್ದೆಯು ಆಗ ಬಂದು ದಣಿದಿದ್ದ ದೇಹಕ್ಕೆ ಕೊಂಚ ಆಪ್ಯಾಯನವನ್ನು ತಂದಿತು. ಸೋತಿದ್ದ ದೇಹದಲ್ಲಿ ಕುಳಿತು ತಾನೂ ಸೋತಂತೆ ಸೊಪ್ಪಾಗಿದ್ದ ಮನವು ಈಗ, ಇಂದ್ರಿಯಗಳ ಕೋಟಲೆಯು ತಪ್ಪುವ ಸ್ವಪ್ನವೃತ್ತಿಯು ಬಲವಾಗಲು ತಾನೂ ಚೇತರಿಸಿಕೊಂಡು ಹಿಂದಿನ ದಿನದ ಕಾರ್ಯಕಲಾಪಗಳ ಮೂಟೆಯನ್ನು ಅಷ್ಟು ಬಿಚ್ಚಿತು. ಕ್ಲಬ್ಬಿನಲ್ಲಿ ನಡೆದುದೆಲ್ಲವೂ ಮತ್ತೆ ಒಗೆಗಣ್ಣೆದುರಿಗೆ ನಡೆಯಿತು. ಆದರೆ ಪರಿಪಾಡಿಯು ಮಾತ್ರ ಬೇರೆಯಾಗಿದೆ. ಮೊದಲು ಶ್ರೀಕಂಠಯ್ಯನವರ ವಿಚಾರ ಬಂದಿದೆ. ಅದರಲ್ಲೂ ಕೊಂಚ ವ್ಯತ್ಯಾಸವಾಗಿದೆ. ಶ್ರೀಕಂಠಯ್ಯನವರು ಇಲ್ಲಿ ರಾಯನ ಮೇಲೆ ಒಂದು ಮೊಕದ್ದಮೆ

ಹೂಡಿದ್ದಾರೆ. ಅವರ ಕಡೆ ವಾದಿಸಲು ಮಧ್ಯ ವಯಸ್ಸು ಕಳೆದಿರುವ ವತ್ಸಲೆ ಯಾದ ಮಾತೆಯೊಬ್ಬಳು ಬಂದು ನಿಂತಿದ್ದಾಳೆ. ಈ ವ್ಯವಹಾರವನ್ನು ಪರಿಶೀಲಿಸಲು ನ್ಯಾಯಾಸ್ಥಾನದಲ್ಲಿ ಕುಳಿತಿರುವುದು ಸಣ್ಣ ವಯಸ್ಸಿನ, ತುಂಬುಗೆನ್ನೆಯ, ಮುದ್ದಿನ ಮುದ್ದೆಯಾದ ಕನ್ನೆಯೊಬ್ಬಳು. ತಾನು ಅಪರಾಧಿಯಾಗಿ ನಿಂತಿದ್ದಾನೆ.

ವಾದಿಯ ಪರ ರಾಯರು ವಾದಿಸಿದರು. ವಾದವೇನೋ ಬಹಳ ಬಲವಾಗಿತ್ತು. ಮೇಜಿನ ಮೇಲೆ ಕುಟ್ಟಲಿಲ್ಲ: ಎದುರಾಳಿಯನ್ನು ತಪ್ಪೆನ್ನ ಲಿಲ್ಲ. ಕೇವಲ ತಾನು ತನ್ನ ಕಕ್ಷಿಗಾರನ ಪರವಾಗಿ ಹೇಳಬೇಕಾಗಿರು ವುದನ್ನು ಮಾತ್ರ ಸಪ್ರಮಾಣವಾಗಿ ಸಬಲವಾಗಿ ಮಂಡಿಸಿದ್ದಾರೆ. ರಾಯ ನಿಗೆ ಅದೆಲ್ಲವೂ ಅರ್ಥವಾದಂತಿದೆ. ನ್ಯಾಯಾಧೀಶರು ಅಪರಾಧಿಯನ್ನು ನೀನೇನಾದರೂ ಹೇಳುವುದುಂಟೋ ಎಂದು ಕೇಳಿದ್ದಾರೆ. ರಾಯನು ಏನೋ ಹೇಳಲು ಹೋಗಿ ಗಂಟಲಿನಿಂದ ಮಾತೇ ಹೊರಡದೆ ತಬ್ಬಿಬ್ಬಾಗಿ ಗಾಬರಿಯಾಗಿ, ಕೊನೆಗೆ, 'ನಂದೇನೂ ಅಪರಾಧವಿಲ್ಲ ಎನ್ನಬೇಕು' ಎಂದು ಕೊಳ್ಳುತ್ತಾ 'ನಾನು ಅಪರಾಧಿ. ಅವರು ಹೇಳಿದ್ದೆಲ್ಲ ಸರಿ.' ಎಂದುಬಿಡು ತ್ತಾನೆ. ನ್ಯಾಯಾಧೀಶನು ದುರುಗುಟ್ಟಿಕೊಂಡು ನೋಡಿ, "ತಿಳಿದೂ ತಿಳಿದೂ ಈ ವ್ಯವಹಾರವನ್ನು ಇಲ್ಲಿಯವರೆಗೂ ತಂದು ನಮ್ಮ ಕಾಲವನ್ನೇಕೆ ಕಳೆದಿರಿ?" ಎಂದು ನಿಷ್ಠುರವಾಗಿ ನುಡಿದು, ರಾಯನಿಗೆ ಶಿಕ್ಷೆಯನ್ನು ವಿಧಿಸುತ್ತಾನೆ.

ಶಿಕ್ಷೆಯೆನ್ನುತ್ತಲೂ ರಾಯನಿಗೆ ಮುಖವು ಭಯದಿಂದ ಬೆಳ್ಳಗಾಗಿ ಹೋಗುತ್ತದೆ. ಕರಾಳ ರೂಪಿನ ರಾಕ್ಷಸನವನಂಥವನೊಬ್ಬನು ಬಂದು ಇವನನ್ನು ಎಳೆದುಕೊಂಡು ಹೋಗಲು ಬರುತ್ತಾನೆ. ರಾಯನು ಅವನ ಜೊತೆಯಲ್ಲಿ ಹೋಗಲು ಒಪ್ಪದಿರಲು ಅವನು ಹಿಡಿದು ಎಳೆದುಕೊಂಡು ಹೋಗಲು ಮುಂದುವರಿದು ಬರುತ್ತಾನೆ. ಆ ರಾಕ್ಷಸನಿಂದ ತಪ್ಪಿಸಿ ಕೊಳ್ಳಲು ಹವಣಿಸುತ್ತಾನೆ. ಆ ಬಾಧೆಯಿಂದ ತಪ್ಪಿಸಿಕೊಳ್ಳಲು ಆಗ ತನ್ನ ಬಳಿಯಿದ್ದ ಯಾವುದೋ ಒಂದು ರಕ್ಷಾ ಮಣಿಯನ್ನು ಹುಡುಕಿಕೊಳ್ಳು

ತ್ತಾನೆ. ಅದು ತನ್ನ ಬಳಿಯಿಲ್ಲ ಏನೋ ಥಟ್ಟನೆ ನೆನೆಪಾಗಿ, ನ್ಯಾಯಾಧೀಶನ ಮೇಜಿನ ಬಳಿಗೆ ಓಡಿ ಹೋಗಿದ್ದಾನೆ. ಅಲ್ಲಿ ತನ್ನದೊಂದು ರಕ್ಷಾಕವಚ ಇರುವುದೆಂದು ಅವನ ಮನವು ನಂಬಿದೆ. ಹೌದು. ಅಲ್ಲಿ ಸಿಕ್ಕಿದೆ. ಅದನ್ನು ಕೈಗೆ ತೆಗೆದುಕೊಂಡಿದ್ದಾನೆ. ಇವನು ಅದನ್ನು ಕೈಗೆ ತೆಗೆದುಕೊಳ್ಳುತ್ತಲೇ ತನ್ನನ್ನು ಹಿಡಿಯಲು ಬಂದಿದ್ದ ಭಯಂಕರಾಕೃತಿಯು ಹೆದರಿ ಓಡಿ ಹೋಗುತ್ತಿದೆ. ನ್ಯಾಯಾಧೀಶನ ಸ್ಥಾನದಲ್ಲಿ ಕುಳಿತಿದ್ದ ಕನ್ನೆಯು, ಕೆಂಡಗಣ್ಣಿನಿಂದ ನೋಡುತ್ತ "ಎಚ್ಚರಿಕೆ. ಅದು ನನ್ನ ಚಿತ್ರ. ನೀನು ಮುಟ್ಟಕೂಡದು" ಎನ್ನುತ್ತಿದೆ.

ರಾಯನು ಕಕ್ಕುಬಿಕ್ಕಾಗಿದ್ದಾನೆ. ಹೌದು. ತಾನು ರಕ್ಷಾ ಕವಚವೆಂದು ತೆಗೆದುಕೊಂಡಿರುವುದು ನ್ಯಾಯಾಧೀಶಳ ಭಾವಚಿತ್ರ. ಏನು ಮಾಡಬೇಕೆಂದು ತೋರದೆ, ಏನೇನೋ ಹೇಳುತ್ತಾನೆ. ಆದರದು ಗಂಟಲಿನಿಂದ ಈಚೆಗೇ ಬರುವುದಿಲ್ಲ. ಏನೋ ಗೊರ ಗೊರ ಅಂದಂತಾಗಿದೆ. ಮತ್ತೆ ಆ ಗಾಬರಿಯಲ್ಲಿ ಮೈಕೈಯೆಲ್ಲ ಬೆವತು ಹೋಗಿ, ನ್ಯಾಯಾಧೀಶನ ಮುಖವನ್ನು ನೋಡಿದರೆ, ಆಕೆಯನ್ನು ನೋಡಿದಂತಿದೆ. ಅಷ್ಟೇ ಅಲ್ಲ. ಇನ್ನೂ ಹತ್ತಿರ ಎಂಬಂತಿದೆ. ಗುರುತೂ ಸಿಕ್ಕಿದಂತಿದೆ. ಮಾತನಾಡಿಸುವುದಕ್ಕೆ ಆ ಪರಿಚಯವನ್ನು ಉಪಯೋಗಿಸಿಕೊಳ್ಳುವುದರೊಳಗಾಗಿ ಆಕೆಯು ಗದರಿಸಿದ್ದಾಳೆ. ಆ ಗದರಿಕೆಯ ಬೆದರಿಕೆಯಲ್ಲಿ ಎಚ್ಚರವಾಗಿ ಹೋಗಿದೆ.

ಎಚ್ಚರವಾಗುವ ವೇಳೆಗೆ ಆರು ಘಂಟೆ ಹೊಡೆಯಿತು. ರಾಯನು ಗಂಟೆಯನ್ನು ಲೆಕ್ಕ ಮಾಡಿಕೊಂಡನು. ಏಕೆ ಎಂಬುದು ಅವನಿಗೇ ತಿಳಿಯದು. 'ಅದೇನು? ಕನಸಿನ ಕನ್ನೆ ಯಾರು?' ಎಂಬುದನ್ನು ಗುರುತಿಸುವ ಯತ್ನದಲ್ಲಿದ್ದ ಮನಸ್ಸು ಇಂದ್ರಿಯವೊಂದರಲ್ಲಿ ನಡೆಸಿದ ವ್ಯಾಪಾರವೋ, ಅಥವಾ ಆರು ಗಂಟೆಯಾದರೆ, ಇನ್ನರ್ಧ ಗಂಟೆಗೆ ಕಾಫೀ ಕುಡಿಯುವ ಹೊತ್ತು, ಆಗಲಾದರೂ ಅಮ್ಮನ ಮುಖವನ್ನು ನೋಡಬಹುದು ಎಂಬ ನಿರೀಕ್ಷೆಯಿಂದ ಎಣಿಸಿದುದೋ ಅಂತೂ ಗಂಟೆಯನ್ನು ಎಣಿಸಿದುದಾಯ್ತು.

ಕನಸು ಕನಸಾದರೂ ಮನಸ್ಸನ್ನು ಕಲಕದೆ ಹೋಗಲಿಲ್ಲ. 'ಏನೊಂದು ಅನುಭವ ಬಂದರೂ ಇದೇಕೆ?' ಎಂದು ಕೇಳುವ ಮನವು ಇಲ್ಲಿಯೂ ತನ್ನ ಕೆಲಸವನ್ನೇನೋ ಮಾಡಿತು. ಆದರೆ ಆ 'ಏಕೆ'ಗೆ ಉತ್ತರವನ್ನಾರು ಹೇಳ ಬೇಕು ? ರಾಯನು ಬಹುವಾಗಿ ಚಿಂತಿಸಿದನು. ಆದರೂ ಆ ಕನ್ನೆಯ ಗುರುತು ಮನಸ್ಸಿಗೆ ಬಂದಂತಿಲ್ಲ, ಹಾಸಿಗೆಯಲ್ಲಿ ಎದ್ದು ಕುಳಿತು ತಲೆಯ ಭಾರವನ್ನು ಕೈಗಳ ಮೇಲೆ ಹೊರೆಸಿ ಯೋಚಿಸಿದನು. ಆದರೂ ಬಗೆ ಹರಿಯ ಲಿಲ್ಲ. ಹೀಗೆ ದೀರ್ಘವಾಗಿ ಯೋಚಿಸುತ್ತಾ ಕುಳಿತಿರುವಾಗ ಹಠಾತ್ತಾಗಿ ಕಣ್ಣು ಮಗ್ಗುಲಲ್ಲಿದ್ದ ಮೇಜಿನ ಕಡೆಗೆ ಓಡಿತು. ಅಲ್ಲಿದ್ದ ಒಂದು ಭಾವ ಚಿತ್ರವು ಕಾಣಿಸಿತು. ಅದು ಹಿಂದಿನ ದಿನ ಶ್ರೀಕಂಠಯ್ಯನವರು ತಂದು ಕೊಟ್ಟಿದ್ದ ತಂಗಮ್ಮನ ಚಿತ್ರ. ಹುಡುಗಿಯು ಎಣೆಗಂಟಿಕ್ಕಿ, ಹೆಚ್ಚು ವಸ್ತ್ರ ಭೂಷಣಗಳ ಆಡಂಬರವಿಲ್ಲದೆ, ಒಂದು ಕುರ್ಚಿಯನ್ನು ಹಿಡಿದು ನಿಂತಿದ್ದಾಳೆ. ಮುಖದಲ್ಲಿ ಸರಸತೆಯ ಕಿರುನಗೆಯು ಎಲ್ಲ ಭೂಷಣಕ್ಕಿಂತಲೂ ಭೂಷಣ ವಾಗಿದೆ. ಆದರೂ, ಆ ಕಣ್ಣಿನಲ್ಲಿ ಒಂದು ತುಂಟಾಟದ ಅಲೆಯಿದೆ. ದೊಡ್ಡತನದ ಬಿಂಕವಿದೆ.

ರಾಯನು ಆ ಪಟವನ್ನು ಕೈಗೆ ತೆಗೆದುಕೊಂಡನು. ಏಕೆ ಏನು ಎಂಬುದು ಮಾತ್ರ ಅವನಿಗೆ ತಿಳಿಯದು. ನೋಡಿದನು. ಮೊದಲು ಮಸಕು ಮಸಕಾಗಿ, ಸೊಳ್ಳೆಯ ಪುರದೆಯ ಹಿಂದೆ ಸಣ್ಣ ದೀಪವಿರುವಾಗ ಕಾಣಿಸುವ ಮೋಹನೆಯ ಮೊಗದಂತೆ ಮನಸ್ಸಿನಲ್ಲಿ ಏನೋ ಹೊಳೆದಂತಾಯಿತು. ಆ ಹೊಳೆಹನ್ನೇ ಹಿಡಿದು ನೋಡಿದನು. ಹೌದು. ಕನಸಿನ ನ್ಯಾಯಾಧೀಶ ಕನ್ನೆಯು ಮತ್ತಾರೂ ಅಲ್ಲ: ಇವಳೇ !

ರಾಯನಿಗೆ ಗಾಬರಿಯಾಯಿತು: 'ಈಗ ಅಮ್ಮನು ರೇಗಿ ಕುಳಿತಿದ್ದಾಳೆ. ಇನ್ನೂ ಈಕೆಯೂ. . . . ?'

ಮನಸ್ಸು ನಡುಗಿತು. ಬೇಡವಾದ ಕಾರ್ಯವು ನಡೆದೇ ನಡೆಯುವು ದೆಂಬ ನಂಬಿಕೆಯು ಬಂದೇ ಬಂದಾಗ ನಡುಗುವಂತೆ ನಡುಗಿತು.

---

## ಮೊದಲನೆಯ ಕಾಗದ

ರಾಯನ ಬೇಸರವನ್ನು ಗಡಿಯಾರವು ಗಮನಿಸಲಿಲ್ಲ. ಮುಂದು ಮುಂದಕ್ಕೆ ನಡೆದೇ ನಡೆಯಿತು. ಹಾಗೂ ಹೀಗೂ ಏಳೂವರೆಯೂ ಆಯ್ತು. ಅಮ್ಮನೂ ಬರಲಿಲ್ಲ. ಕಾಫಿಯೂ ಬರಲಿಲ್ಲ. ರಾಯನಿಗೆ ಕಾಫಿ ಬೇಕೇ ಬೇಕು. ಆದರೆ ಯಾರನ್ನು ಕೇಳಬೇಕು ? ಅದೇ ಒಂದು ದೊಡ್ಡ ಸಮಸ್ಯೆ ಯಾಯ್ತು. ಕೊನೆಗೆ ಕೂಗುವ ಗಂಟೆಯೊತ್ತಿ ಆಳನ್ನು ಕರೆದು, ಆ ಪರಂಪರೆ ಯಿಂದ ಒಂದಿಷ್ಟು ಕಾಫಿಯನ್ನು ಸೇವಿಸಿಯಾಯ್ತು.

ರಾಯನ ಮನಸ್ಸಿನಲ್ಲಿದ್ದ ಇತರ ಭಾವಗಳೆಲ್ಲ ಸಡಿಲಿ, ಎರಡೇ ಎರಡು ಹುರಿಗೊಂಡು ನಿಲ್ಲುತ್ತ ಬಂದುವು. ಮಹಾ ನದಿಯೊಂದು ಹೊರಟರೆ ಸಿಕ್ಕ ಹಳ್ಳಗಳೆಲ್ಲ ಬಂದು ಸೇರಿ ಅದನ್ನೇ ದೊಡ್ಡದು ಮಾಡುವಂತೆ, ಹಿಂದಿನ ರಾತ್ರಿಯಿಂದ ಮನಸ್ಸಿನಲ್ಲಿ ಕುಳಿತಿದ್ದ ಅಮ್ಮನ ದಿಗಿಲು ಪ್ರಕಟ ವಾಗಿ ಬಲಿಯುತ್ತ ಬಂದಿತು. ಆಳವಾದ ನದಿಯಲ್ಲಿ, ಸಂಜೆಯ ಹೊತ್ತಿನಲ್ಲಿ, ಮೇಲೆ ಬಿಸಿಯ ನೀರು ಬರುತ್ತಿದ್ದರೂ ಆಳುದ್ದದ ಕೆಳಗೆ ತಣ್ಣಗಿರುವ ನೀರು ಹರಿಯುತ್ತಿರುವಂತೆ, ಮೇಲೆ ಪ್ರಕಟವಾಗಿ ಕಂಡು ಬಲಿಯುತ್ತಿರುವ ಈ ಅಂಜಿಕೆಯ ಹಿಂದೆ, ಕನಸಿನಲ್ಲಿ ಕಂಡ ಅವ್ಯಕ್ತ ದೃಶ್ಯ ದರ್ಶನದಿಂದ ಹುಟ್ಟಿರುವ ಅಪ್ರಕಟ ಭಯವೊಂದು. ಅದಕ್ಕೆ ಇದು, ಇದಕ್ಕೆ ಅದೂ ಸೇರಿ ಒಂದಕ್ಕೊಂದು ಬಲವಾಗಿ ನಿಂತು ಚದುರಂಗ ಕಾಯಿಗಳಂತೆ ಆಗಿವೆ.

ರಾಯನು ಸುಮಾರು ಹೊತ್ತು ಯೋಚಿಸಿದ್ದನು: ಮತ್ತೆಯೂ ಯೋಚಿಸಿದನು. ರಾತ್ರಿಯ ಏಕಾಂತದಲ್ಲಿ ಮನಸ್ಸು ಮಾಡಿದ್ದ ಸಿದ್ಧಾಂತ ವನ್ನು ಬೆಳಗಿನ ಹೊತ್ತಿನ ಸಮಬುದ್ಧಿಯೂ ಅಂಗೀಕರಿಸಿ, " ಹೋಗಿ ಅಮ್ಮನ ಕೈಕಾಲು ಕಟ್ಟಿಕೊಂಡು ಬಿಡಬೇಕು " ಎಂದು ಗೊತ್ತಾಯಿತು. ಆದರೆ, ಸಿದ್ಧಾಂತವು ಬಂದಕೂಡಲೇ ಅದನ್ನು ನಡೆಸುವುದಕ್ಕೂ ಒಂದು ಸಾಮರ್ಥ್ಯವು ಬೇಕಲ್ಲ ? ನಿತ್ಯದ ಪ್ರಾತರ್ವಿಧಿಗಳನ್ನೆಲ್ಲ ಮುಗಿಸಿಕೊಂಡು ಹೋಗೋಣ ಎಂದು ಅತ್ತ ಕಡೆ ತಿರುಗಿದನು. ಅದೂ ಮುಗಿಯಿತು.

ಮುಖವು ತನ್ನ ಉಪಚಾರವನ್ನು ಪಡೆದಿದೆ. ತಲೆಯ ಮೇಲೆ 'ಚದುರ ಶಿಖೆ'ಯು ತನ್ನ ಉಪಚಾರವನ್ನು ಸ್ವೀಕರಿಸಿದೆ. ವಸ್ತ್ರಗಳು ತಮ್ಮ ಉಪಚಾರ ವನ್ನು ಕೈಕೊಂಡಿವೆ. ಸಣ್ಣ ಜೋಡನ್ನು ಕಾಲಿಗೆ ಅಳವಡಿಸಿ ರಾಯರು ಹೊರಡುವ ವೇಳೆಗೆ ಆಳು ಬೆಳಗಿನ ಟಪ್ಪಾಲನ್ನು ತಂದುಕೊಟ್ಟನು.

ಬಂದ ನಾಲ್ಕೈದು ಕಾಗದಗಳಲ್ಲಿ ಒಂದು ವಿನಾ ಮಿಕ್ಕೆಲ್ಲವೂ ಬರೆಹ ದಿಂದಲೇ ಇಂಥವೆಂದು ತಿಳಿಯಿತು. ಒಂದು ಮಾತ್ರ ಹೊಸ ಬರೆಹ. ಅಪರಿಚಿತವಲ್ಲ, ಆದರೆ ಥಟ್ಟನೆ ಗುರುತು ಸಿಕ್ಕಿಲ್ಲ. ಆದರೂ ಅದನ್ನು ಬಿಟ್ಟು ಹೋಗಲು ಮನಸಿಲ್ಲ. ಮಿಕ್ಕ ಕಾಗದಗಳನ್ನೆಲ್ಲ ಆ ಮೇಲೆ ನೋಡಿದ ರಾಯಿತು ಎಂದುಕೊಂಡು ಹೊರಟುಬಿಟ್ಟಿದ್ದ ರಾಯನು ಆ ಒಂದು ಕಾಗದ ಕ್ಕಾಗಿ ತನ್ನ ಮನಸ್ಸನ್ನು ಬದಲಾಯಿಸಿದನು. ಎಲ್ಲ ಕಾಗದಗಳನ್ನು ಕೈಯಲ್ಲಿ ತೆಗೆದುಕೊಂಡೇ ಹೊರಡುವುದೆಂದು ಗೊತ್ತಾಯಿತು.

ಮೊದಲನೆಯ ಸಲ ಓದಿಸಿಕೊಳ್ಳುವ ಭಾಗ್ಯವೂ ಆ ಕಾಗದಕ್ಕೇ ಬಂದಿತು. ರಾಯನು ನಡುಗುತ್ತಿರುವ ಕೈಗಳಿಂದ ಅದನ್ನು ಒಡೆದು ಓದಿದನು. ಕಾಗದವು ವಿಚಿತ್ರವಾಗಿತ್ತು.

"ಶ್ರೀಯುತ ಶ್ರೀಮಂತರ ಸನ್ನಿಧಾನಕ್ಕೆ ನಮಸ್ಕಾರಗಳು.

ಸನ್ನಿಧಿಯಿಂದ ಬ್ಯಾಂಕ್ ಮುಖಾಂತರವಾಗಿ ಬರೆದಿರುವ ಕಾಗದವು ಬಂದು ತಲಪಿತು. ಅದರಲ್ಲಿ ನನಗಾಗಿ ಒಂದು ಮನೆಯನ್ನೂ ತಿಂಗಳಿಗೆ ಐವತ್ತು ರೂಪಾಯಿಯನ್ನೂ ಕೊಡುವುದಾಗಿ ಅಪ್ಪಣೆಯಾಗಿದೆ. ನನಗೆ ಆ ಕಾಗದವನ್ನು ಓದಿ ನಗುವು ಬಂತು. ತಮ್ಮನ್ನು ನನಗಿಂತ ದೊಡ್ಡವ ರೆಂದು, ನನ್ನ ಪೂಜ್ಯ ದೈವವೆಂದು ಭಾವಿಸಿದ್ದುದು ಅಪರಾಧವೆಂಬುದು ತಿಳಿದು, ನನ್ನ ಅವಿವೇಕಕ್ಕೆ ನಾನೇ ಮರುಗುವಂತಾಯ್ತು.

ನಾನು ತಮ್ಮನ್ನು ಕೈ ಹಿಡಿದಂದು 'ನಮ್ಮ ತಂದೆಯು ನನ್ನ ಇಷ್ಟ ದೈವವೊಂದನ್ನು ತಂದುಕೊಟ್ಟರು. ನನ್ನ ಜೀವನವನ್ನು ನನ್ನ ಸರ್ವಸ್ವ ವನ್ನು ಈ ದೈವಕ್ಕೆ ಒಪ್ಪಿಸಿ ಜನ್ಮ ಸಾರ್ಥಕ್ಯವನ್ನು ಸಂಪಾದಿಸುವೆನು. ಇಹಪರಗಳೆರಡರಲ್ಲಿಯೂ ಸುಖಿಯಾಗುವೆನು.' ಎಂದುಕೊಂಡು ಹಿಗ್ಗಿದ್ದೆ.

ಆದರೆ ನಿಮ್ಮ ಕಾಗದದಿಂದ, 'ನೀವೊಬ್ಬ ದಳ್ಳಾಳಿ ವ್ಯಾಪಾರಿಗಳು. ನಾಗೋಲಿಯ ದಿನ ನಾವು ವಿನೋದಕ್ಕಾಡಿದ ಉಪ್ಪಿನಾಸೆ ಬೇಳಿಯಾಸೆಯಾಟವೇ ನಿಮ್ಮ ಗುರಿ'ಯೆಂಬುದು ಇಂದು ಮನಸ್ಸಿಗೆ ಬಂದಿದೆ. ಈ ದೇಹವನ್ನು ಒಂದೆರಡು ದಿನ ಮಗ್ಗುಲಲ್ಲಿ ಕುಳ್ಳಿರಿಸಿಕೊಂಡು ಎಲ್ಲರ ಎದುರಿಗೂ ಹೆಂಡತಿಯೆಂದು ಒಪ್ಪಿಕೊಂಡ ತಪ್ಪಿತಕ್ಕಾಗಿ, ಈಗ ಈ ಮಾಸಾಶನದ ದಂಡವನ್ನು ಕೊಟ್ಟು ರುಣಮುಕ್ತರಾಗಬೇಕೆಂದು ಭಾವಿಸಿರುವರೇನು ?

ಹೀಗೆ ಕೊಂಚ ಹಣವನ್ನು,—ನಾಯಿಗೆ ಒಂದು ಚೂರು ರೊಟ್ಟಿ ಎಸೆಯುವಂತೆ — ನನ್ನ ಬಾಯಿಗೆ ಹಾಕಿ ತಾವು ಸ್ವತಂತ್ರರಾಗುವೆವೆಂದುಕೊಂಡಿರುವುದು ಬಹಳ ದೊಡ್ಡ ತಪ್ಪು. ಯಜ್ಞೇಶ್ವರನ ಎದುರಿನಲ್ಲಿ ಧರ್ಮಪತ್ನಿಯಾಗಿ ಕೈ ಹಿಡಿದಿರುವಿರಿ. ಈಗ ಇಷ್ಟು ಸುಲಭವಾಗಿ ನೀವು ನನ್ನನ್ನು ಎಸೆದು ಬಿಡುವುದಕ್ಕೆ ನಾನೇನು ಹಳೆಯಂಗಿ ಎಂದುಕೊಂಡಿರಾ ?

ಇನ್ನೂ, ಈ ಮೂರು ದಿನಗಳಿಂದಲೂ ನಿಮಗೆ ಈ ದುರ್ಭಾವನೆಯು ಇದ್ದುದೇ ಆದರೆ, ಇದೋ ನಿಮ್ಮ ಸಲಹೆಗೆ ಪ್ರತಿಸಲಹೆ. ನಮ್ಮ ತಂದೆಯವರು ತಮ್ಮಷ್ಟು ಶ್ರೀಮಂತರಲ್ಲದಿದ್ದರೂ ಶ್ರೀಮಂತರೇನೋ ಅಹುದು ಎಂಬುದನ್ನು ತಾವೂ ಬಲ್ಲಿರಿ. ತಾವು ತಮ್ಮ ಸ್ವಾತಂತ್ರ್ಯಕ್ಕೆ ಐವತ್ತು ರೂಪಾಯಿನ ಬೆಲೆ ಕಟ್ಟಿದ್ದೀರಿ. ನಾನು ತಮ್ಮಷ್ಟು ವಿದ್ಯಾವಂತಳೂ ಅಲ್ಲ ಬುದ್ಧಿವಂತಳೂ ಅಲ್ಲ. ಆದರೂ ಅಭಿಮಾನಿ. ನನ್ನ ಸ್ವಾತಂತ್ರ್ಯದ ಬೆಲೆಯು ತಮ್ಮ ಬೆಲೆಯ ಎರಡರಷ್ಟಾದರೂ ಇರಬೇಕು. ಅದರಿಂದ ನಾನು ನಮ್ಮ ತಂದೆಗೆ ಹೇಳಿ ತಮಗೆ ತಿಂಗಳಿಗೆ ನೂರು ರೂಪಾಯಿ ಕೊಡಿಸುತ್ತೇನೆ. ನಮ್ಮ ಊರಿನಲ್ಲಿ ಗಂಡಹೆಂಡಿರು ಒಬ್ಬರಿಗೊಬ್ಬರು ಬೇಡವಾದಾಗ 'ತೆರ'ವನ್ನು ಕೊಟ್ಟು ಬೇರೆಯಾಗುವುದುಂಟು. ಅದರಂತೆ, ತಾವು ಬೇರೆ ಮದುವೆ ಮಾಡಿಕೊಂಡರೆ, ಎಷ್ಟು ಖರ್ಚಾಗುವುದೋ ಅಷ್ಟು ಖರ್ಚನ್ನೂ ತೆರವಾಗಿ ಕೊಡಿಸುತ್ತೇನೆ. ನನ್ನ ಸ್ವಾತಂತ್ರ್ಯವನ್ನು ನನಗೆ ಮಾರಿಬಿಡಿ.

ನಿಮ್ಮಂತಹವರ ಕೈ ಹಿಡಿದು ಇಲ್ಲಿನ ಸುಖವನ್ನು ಕಾಣದೆ ಕಾಸ್ ಬಂಗಲೆಯ ಹೆಣ್ಣು ಹುಲಿಯಂತೆ ಬದುಕಿರುವುದಕ್ಕಿಂತ, ಸ್ವತಂತ್ರಳಾಗಿ

ಬೀದಿಯ ನಾಯಿಯಂತೆ ಸ್ವಚ್ಛಂದವಾಗಿರುವುದೇ ಲೇಸು ಎಂಬ ದುರ್ಭಾವನೆಯನ್ನು ನನ್ನ ಮನಸ್ಸಿಗೆ ನಿಮ್ಮ ಕಾಗದವು ತಂದು ಕೊಟ್ಟಿದೆ. ನನ್ನ ಯೋಗ್ಯತೆಗೆ ಅದು ಸರಿಯಲ್ಲವೆಂದು ಅದನ್ನು ಹೊಸಲ ಆಚೆಯೇ ಇಟ್ಟಿದ್ದೇನೆ. ಈ ನನ್ನ ಕಾಗದಕ್ಕೆ ತಮ್ಮ ಪ್ರತ್ಯುತ್ತರವನ್ನು ಬರೆಯೋಣವಾಗಲಿ. ತಮ್ಮ ಸಿದ್ಧಾಂತಕ್ಕೆ ಅನುಸಾರವಾಗಿ ನಾನೂ ಸಿದ್ಧಾಂತ ಮಾಡುತ್ತೇನೆ.

ಇತಿ, ತಮ್ಮ ಪಾದಸೇವಕಿಯೆಂದು
ಮೊನ್ನೆ ಮೊನ್ನೆಯವರೆಗೂ ಹಿಗ್ಗುತ್ತಿದ್ದ
ತುಂಗಾ, ಅಲ್ಲ – ತುಂಗಭದ್ರಮ್ಮ.

ಹಿಂದಿನಿಂದ :—

ತಮ್ಮ ಪ್ರತ್ಯುತ್ತರದಲ್ಲಿ ಪ್ರಾಣಪ್ರಿಯೆ, ಪ್ರೇಯಸಿ, ಮೊದಲಾದ ಅವಲಕ್ಷಣ ಪದಗಳನ್ನು ಹಾಕಬೇಡಿ. ಮನಸ್ಸಿನಲ್ಲಿ ಇಲ್ಲದ್ದನ್ನು ಮಾತಿನಿಂದ ಆಡಿ ನನಗೆ ಅವಮಾನ ಮಾಡಬೇಡಿ. ಲಕ್ಷಣವಾಗಿ ಶ್ರೀಮತಿ ತುಂಗಭದ್ರಮ್ಮನವರಿಗೆ ಎಂದೇ ಬರೆಯಬೇಕು. ಏಕವಚನದಲ್ಲಿದ್ದರೆ, ನಾನು ಆ ಕಾಗದವನ್ನು ಓದುವುದಿಲ್ಲ. ಹರಿದು ಎಸೆದು ಬಿಡುತ್ತೇನೆ ಮತ್ತು ನಿಮ್ಮ ಉತ್ತರವು ನಾಲ್ಕು ದಿನಗಳೊಳಗಾಗಿ ಬರಬೇಕು. ಕಾಲಾತೀತವಾದರೆ ನನ್ನ ಮೇಲೆ ತಪ್ಪಿಲ್ಲ.

ರಾಯನಿಗೆ ಕಾಗದವನ್ನು ಓದಿ ಬೆವರು ಹಿಡಿದುಹೋಯಿತು. ಮುಂದಕ್ಕೊಂದು ಅಡಿಯಿಡುವುದೂ ಸಾಧ್ಯವಾಗಲಿಲ್ಲ. ಕಾಗದವನ್ನು ಒಡೆದು ಮೊದಲನೆಯ ಪಂಕ್ತಿಯನ್ನು ಓದಿದಾಗ ಎಷ್ಟು ದೂರ ಬಂದಿದ್ದನೋ ಅಷ್ಟೇ ದೂರ. ಅಲ್ಲಿಂದ ಅತ್ತ ಇತ್ತ ಕದಲದೆ, ನಿಂತಲ್ಲಿಯೇ ನಿಂತು ಓದಿದನು. ಒಂದು ಸಲ ಓದಿದರೆ ಅರ್ಥವಾಗಲಿಲ್ಲ. ಏನೋ ಲಾಯರು ನೋಟೀಸಿದ್ದ ಹಾಗಿತ್ತು. ಮತ್ತೂ ಒಂದು ಸಲ ಓದಿದನು. ತನ್ನ ಮುಖದ ಮುಂದೆ ಕನ್ನಡಿಯನ್ನು ಹಿಡಿದು, "ನೋಡಿಕೋ ನಿನ್ನ ಕೋಡಗನ ಮುಖವನ್ನು" ಎಂದ ಹಾಗಿರುವಂತೆ ಭಾಸವಾಯಿತು. ಎರಡು ದಿನಕ್ಕೆ ಮುಂಚೆ,

ಶ್ರೀಕಂಠಯ್ಯನವರ ಮೇಲೆ ಪೈನ್ ಆಪ್ಪಲ್ ಚೆಲ್ಲುವುದಕ್ಕೆ ಮುಂಚೆ, ಅಮ್ಮನ ಹಂಬಲದ ಗೋಳು ಕರೆಯನ್ನು ಕೇಳುವುದಕ್ಕೆ ಮುಂಚೆ, ಈ ಕಾಗದವು ಬಂದಿದ್ದರೆ, ಏನಾಗುತ್ತಿದ್ದಿತೋ ಹೇಳಲು ಸಾಧ್ಯವಿಲ್ಲ. ಈಗ ರಾಯನು ರೇಗಲಿಲ್ಲ. "ನಿಜ. ನಾನು ನನ್ನ ಸ್ವಾತಂತ್ರವನ್ನು ಸಂತೆಯ ಸರಕು ಮಾಡಿದೆ. ಹಾಗೆ ಮಾಡಬಾರದಾಗಿತ್ತು" ಎಂದುಕೊಂಡನು.

ರಾಯನು ನಡುಮನೆಯಲ್ಲಿ ಕುಳಿತುಕೊಂಡನು. ಅವನ ಯತ್ನವಿಲ್ಲದೆ ಯೋಚನೆಗಳು ಹೊರಟವು. ಯೋಚನೆಗಳು ಬಲಿತು ತಲೆಯನ್ನು ತುಂಬಿ ಹಿಂದಕ್ಕೂ ಮುಂದಕ್ಕೂ ಹೊರಟವು. ಹಿಂದೆ ಮದುವೆಯಾದಂದು ತುಂಗಳು ಬಂದು ಪಿಟ್ಟೆ ಹೊಡೆದಾಗ, ತಾನು ರೇಗಿ, ಪಿಟ್ಟೆ ಹೊಡೆಯುವ ನೆವದಲ್ಲಿ ಅಪ್ಪಳಿಸಿದ್ದು, ಅವಳು ನೋವಿನಿಂದ ಊರಿದ ನೀರನ್ನು ಕಣ್ಣಿನ ರೆಪ್ಪೆಯಿಂದ ಬಿಡದೆ ತಡೆದುಕೊಂಡು "ನಾನೂ ಹೀಗೇ ಹೊಡೆಯಬಹುದೋ?" ಎಂದುದು: ತಾನು "ಅಗತ್ಯವಾಗಿ" ಎಂದು ಹೆಮ್ಮೆಯಿಂದ ಹೇಳಿದುದು: ಅವಳು ಹೋಗಿ ರೆಪ್ಪೆಯನ್ನು ತೊಡೆಯುವಷ್ಟು ಜಾಗ್ರತೆಯಾಗಿ ಪಿಟ್ಟೆಯನ್ನು ಮಾಡಿಕೊಂಡು ಬಂದು "ಎಚ್ಚರ. ಇದೋ ಪಿಟ್ಟೆಯನ್ನು ಹೊಡೆಯುತ್ತೇನೆ" ಎಂದು ಸೂಚನೆಯನ್ನು ಕೊಟ್ಟು ಹೊಡೆದುದು: ಓ! ಏನು ಮಹಾ! ಎಂದು ತಾನು ನಿಂತಿದ್ದುದು. ತಾನು ಆ ಏಟು ತಡೆಯಲಾರದೆ ಕೆಳಕ್ಕೆ ಬಿದ್ದು ಹೋದುದು: ಎಲ್ಲರೂ ಹೊಟ್ಟೆ ಹುಣ್ಣಾಗುವಂತೆ ನಕ್ಕುಬಿಟ್ಟುದು: ತುಂಗಳು "ಅದಕ್ಕೇ ಹೇಳೋದು. ಹೆಂಗಸರನ್ನು ರೇಗಿಸಬಾರದು" ಎಂದು ಬೇಟೆಯನ್ನು ಹೊತ್ತುಕೊಂಡು ಜಂಭದಿಂದ ಹೋಗುವ ಹುಲಿಯಂತೆ ಒಳಕ್ಕೆ ಹೊರಟು ಹೋದುದು: ತಾನು ಆ ಅಪಮಾನದ ಭರದಲ್ಲಿ "ಇರಲಿ, ಇಷ್ಟು?" ಎಂದು ಶಫಥ ಮಾಡಿಕೊಂಡುದು: ಅದಕ್ಕಾಗಿ ತಾನು ಮಾವನಿಗೆ ಉತ್ತರವನ್ನೇ ಒಯದೆ ಇದ್ದುದು: ಎಲ್ಲವೂ ನೆನಪಾಯಿತು.

ನೊಂದ ಬಗೆಯಲ್ಲವೇ ನಿಜದ ಗುರುತರಿಯ ಬಲ್ಲುದು! ರಾಯನು ಇಂದು ನಿಜವನ್ನು ಭಾವಿಸುವ ಸ್ಥಿತಿಯಲ್ಲಿದ್ದನು. ಕಲುಷಿತವಲ್ಲದ ಬಗೆ:

ಕೊಂಚ ದುಃಖದಿಂದಲೂ ಹದಗೊಂಡಿತ್ತು. ಜೊತೆಗೆ, ಮನವೊಂದೇನೇನು ಮಾನವನ ಸಂಸಾರವನ್ನು ನಿರ್ವಹಿಸುವುದು ? ಮನಸ್ಸಿಗೆ ಹೊಸದೊಂದು ಯೋಚನೆಯು ಬಂದಿತು. "ಆಗಲಿ. ಈ ಕಾಗದವನ್ನು ತಪ್ಪು ಎನ್ನೋಣ. ಆದರೆ ಆ ತಪ್ಪು ಹುಟ್ಟಿದುದು ಎಲ್ಲಿ ? ಅಮ್ಮನು ನನ್ನನ್ನು ಇಸ್ಪೀಟು ಆಡಿ ಹಾಳಾಗಬೇಡ ಎಂದುದಕ್ಕೆ ತನಗೆ ಬಂದ ಕೋಪಕ್ಕೆ ಇವಳನ್ನೇಕೆ ಆಹುತಿ ಮಾಡಬೇಕಿತ್ತು ? ನೆರೆದು ನಿಂತಿದ್ದ ಹೆಣ್ಣಿಗೆ ಮೊದಲನೆಯ ಕಾಗದವಾಗಿ ಜೀವನಾಂಶಕ್ಕೆಷ್ಟು ಎಂದು ಬರೆದುದು ಅಥವಾ ಬ್ಯಾಂಕಿನ ಮೂಲಕ ಬರೆಸಿದುದು ಯಾರ ತಪ್ಪು ?" ಎಂದು ನಿಷ್ಠುರವಾಗಿ ಕೇಳಿತು. ರಾಯನು ಏನೂ ಉತ್ತರ ಕೊಡಲಾರದೆ ಹೋದನು. ಮುಖವೆಲ್ಲ ಕೆಂಪಾಗಿ ಮತ್ತೊಮ್ಮೆ ಬೆವರಿತು.

ರಾಯನು ಬಹು ಗೌರವದಿಂದ ಕಾಗದವನ್ನು ಮಡಿಸಿಟ್ಟುಕೊಂಡು ಅಮ್ಮನನ್ನು ನೋಡಲು ಹೊರಟನು. ಹಿಂದಿನ ರಾತ್ರಿ ಅಮ್ಮನನ್ನು ನೋಡಲು ಧೈರ್ಯವಿರಲಿಲ್ಲ. ಈಗ ಈ ಕಾಗದವನ್ನು ಓದಿ, ಎರಡು ಸಲ ಬೆವರಿದ ಮೇಲೆ ಧೈರ್ಯ ಬಂದಿತ್ತು.

---

## ತಾಯಿ ಮಕ್ಕಳು

ರಾಯನು ಧೈರ್ಯದಿಂದ ಕಾವೇರಮ್ಮನವರ ಕೋಣೆಯೊಳಕ್ಕೆ ಬಂದನು. ಅವರು ಈ ವೇಳೆಗೆ ಎದ್ದು ಮಡಿಗಿಡಿ ಎಲ್ಲವೂ ಮುಗಿಸಿಕೊಂಡಿರಬೇಕು. ಅವರಿಂದು ಏಕೋ ಏನೋ ಬಿಟ್ಟ ಕಣ್ಣು ಬಿಟ್ಟುಕೊಂಡು ಇನ್ನೂ ಹಾಸುಗೆಯ ಮೇಲೆಯೇ ಮಲಗಿದ್ದರು. ರಾಯನು ಬಂದುದು ಕಾಣಿಸಿತೋ ಇಲ್ಲವೋ ಅಂತೂ ಅವರ ಧ್ಯಾನ ಮುದ್ರೆಗಳು ಬದಲಾಗಲಿಲ್ಲ.

ರಾಯನು ಬಾಗಿಲಲ್ಲಿ ಅಷ್ಟು ಹೊತ್ತು ನಿಂತುಕೊಂಡಿದ್ದವನು "ಅಮ್ಮ" ಎಂದನು. ಇದುವರೆಗೆ ರಾಯನು ಆಗಾಗ ಬರುವುದು, ಅಮ್ಮನ ಮಂಚದ ಮೇಲೆ ಅಮ್ಮನ ಮಗ್ಗುಲಲ್ಲಿ ಕುಳಿತುಕೊಳ್ಳುವುದು

ಆಕೆಯು ನಿಶ್ವಾಸದಿಂದ ತಲೆಯನ್ನು ಸವರುವುದು, 'ಕ್ರಾಪ್ ಕೆಟ್ಟುಹೋಯಿ ತಲ್ಲಮ್ಮಾ' ಎಂದು ಗೊಣಗಿದರೆ, 'ಹೋದರೆ ಹೋಯಿತು, ಇನ್ನೊಂದು ಸಲ ಬಾಚಿಕೊ, ಏನು ಗಂಟು ಹೋಗುವುದು?' ಎಂದು ಹೇಳುತ್ತಿದ್ದುದೂ ಇದೆಲ್ಲ ಉಂಟು. ಆದರೆ ಇಂದು ಕಾವೇರಮ್ಮನವರು ಆ 'ಅಮ್ಮಾ' ಕೇಳಿ ತಟ್ಟನೆದ್ದು ಕುಳಿತುಕೊಂಡರು. ಇಂದು ಅವರ ಕಿವಿಗೆ ಬಿದ್ದುದು ತಾನು ಸಾಕಿದ ಮಗುವಿನ 'ಅಮ್ಮಾ' ಅಲ್ಲ. ಒಬ್ಬ ಪರಿಚಿತನಾದ ಗಂಡುಸಿನ ಕೂಗು.

ಆ ಪ್ರತ್ಯಾಸವನ್ನು ಕಂಡು ರಾಯನಿಗೆ ಜುಳ್ ಎಂದಹಾಗಾಯಿತು. ಆಕೆಯ ಹೃದಯ ಮಂದಿರದಲ್ಲಿ ತನಗೆ ಇದ್ದ ಸ್ಥಾನವು ತಪ್ಪಿ ಹೋಗುವು ದೆಂಬ ಶಂಕೆಯೂ ಇಲ್ಲದಿದ್ದ ರಾಯನಿಗೆ, ಅಲ್ಲಿ ತನಗೆ ಇದ್ದ ಸ್ಥಾನವು ಲುಪ್ತ ವಾಗಿದೆಯೆಂಬ ಅರಿವು ವಿಷದ ಮುಳ್ಳಿನ ಚುಚ್ಚಿನಂತಾಯಿತ್ತು. ಕೂಡಲೇ ಹೋಗಿ "ಅಮ್ಮಾ! ಇದು ಸರಿಯೇನಮ್ಮಾ?" ಎಂದು ಕಾಲು ಕಟ್ಟಿ ಕೊಳ್ಳಬೇಕೆನ್ನಿಸಿತು. ಆದರೆ, ಬಿಂಕ! ಅದಿದೆಯಲ್ಲ. ಮಾನವ ವರ್ಗದ ಸುಖದ ಮೊದಲನೆಯ ವೈರಿ! ಅದು ಅವನಿಗೆ ಅವಕಾಶ ಕೊಡಲಿಲ್ಲ. ಇನ್ನೊಂದು ಹೆಜ್ಜೆ ಮಾತ್ರ ಮುಂದಿಟ್ಟನು. ಅಷ್ಟರೊಳಗಾಗಿ ಆಕೆಯು ಎದ್ದು ನಿಂತು ಬಿಟ್ಟರು. ರಾಯನಿಗೆ ಆಕಾಶವೇ ಕಳಚಿಕೊಂಡು ತಲೆಯ ಮೇಲೆ ಬಿದ್ದಂತಾಯಿತು. ಕಣ್ಣಲ್ಲಿ ನೀರು ಬಂತು. ತಲೆಯು ತಗ್ಗಿಕೊಂಡಿತ್ತು.

ಒಂದು ಗಳಿಗೆ ಇಬ್ಬರಲ್ಲಿ ಯಾರೂ ಮಾತಾಡಲಿಲ್ಲ. ರಾಯನ ಕಣ್ಣಲ್ಲಿ ನೀರು ಪಟಪಟನೆ ಉದುರಿತು. ಕೊನೆಗೆ ಬಹು ಕಷ್ಟದಿಂದ ತಲೆಯೆತ್ತಿ "ಅಮ್ಮಾ!" ಎಂದು ಇನ್ನೊಮ್ಮೆ ಕಟ್ಟಿದ ಗಂಟಲಿನಿಂದ ಕಷ್ಟದಿಂದ ಉಸಿರೆಳೆದು ಕೂಗಿದನು. ಹೃದಯದ ವೇದನೆಯೆಲ್ಲ ಆ ಎರಡು ಅಕ್ಷರ ಗಳಲ್ಲಿ ಭದ್ರವಾಗಿ ಅಡಕಿಟ್ಟದ್ದಂತೆ ತೋರಿತು. ಮಾತೃ ಹೃದಯಕ್ಕೆ ಆ ವೇದನೆಯರಿವಾಯಿತು. ಆದರೂ ಮಾತೃವೂ ಸ್ತ್ರೀಯಲ್ಲವೆ? ತಾನೂ ಅದಷ್ಟು ವೇದನೆಯನ್ನು ಅನುಭವಿಸಿದರೂ, ಅನುಭವಿಸುತ್ತಿದ್ದರೂ, ಗಂಭೀರಭಾವವನ್ನು ತಿಲಮಾತ್ರವೂ ಸಡಲಿಸದೆ, "ಬಾಪ್ಪ! ನೀನು ಬಂದೆ?" ಎಂದರು. ರಾಯನಿಗೆ ಏನು ಹೇಳಬೇಕೋ ತೋರಲಿಲ್ಲ. ಬಹು

ಶ್ರಮಪಟ್ಟು " ಅಮ್ಮಾ ! ನಿನ್ನೆಯ ರಾತ್ರಿ. . . . " ಎಂದನು. ಗಂಟಲು ಕಟ್ಟಿಕೊಂಡಿತು. ದುಃಖವು ತಾನೇ ತಾನಾಯಿತು. ಇನ್ನು ತಡೆಯಲು ಸಾಧ್ಯವಿಲ್ಲದೆ ಹೋಗಿ, ದೊಡ್ಡದಾಗಿ ಅಳುತ್ತ, " ಅಮ್ಮಾ, ನಿನ್ನೆಯ ರಾತ್ರಿ ಎಲ್ಲವನ್ನೂ ಕೇಳಿದೆನಮ್ಮಾ ! ತಪ್ಪಾಯಿತು. ಇನ್ನು ಮುಂದೆ ಹೀಗೆ ದುಡುಕುವುದಿಲ್ಲಮ್ಮಾ ! ಮನ್ನಿಸಮ್ಮಾ ! " ಎಂದನು.

ತಾಯಿಯು ಒಂದು ಗಳಿಗೆ ಹಾಗೆಯೇ ಅವನನ್ನು ನೋಡುತ್ತಿದ್ದು ಹೇಳಿದರು: " ತಪ್ಪೇನಪ್ಪಾ ! ನಾನೂ ಸುಮಾರು ಒಂದು ವರ್ಷದಿಂದ ಯೋಚಿಸುತ್ತಿದ್ದೆ. ನಿನ್ನ ಆಸ್ತಿಪಾಸ್ತಿ ಎಲ್ಲವೂ ನೀನು ವಹಿಸಿಕೊಂಡರೆ ನಾನೂ ಕಾಶೀ ಯಾತ್ರೆ ಹೋಗಿಬರೋಣ ಎಂದು. ಎಲ್ಲವೂ ಸುಮುಖವಾಗಿರುವಾಗ ನಗುನಗುತ್ತಾ ಹೋಗಿ ಬರುವುದು ನನ್ನ ಹಣೆಯಲ್ಲಿ ಬರೆದಿರಲಿಲ್ಲ, ಈಗ ತಾನೇ ಏನಂತೆ? ಗುಮಾಸ್ತರಿಗೆ ಹೇಳಿ ಕಳುಹಿಸಿದ್ದೇನೆ. ನಿನಗೂ ನಾನೇ ಹೇಳಿ ಕಳುಹಿಸಬೇಕೆಂದಿದ್ದೆ. ನೀನೇ ಬಂದೆ. ಇವೊತ್ತು ಎಲ್ಲವನ್ನೂ ಲೆಕ್ಕ ನೋಡಿ ವಹಿಸಿಕೊಂಡು ಬಿಡು. ಅದೇನು ಸುಮಾರು ಎರಡು ಗಂಟೆ ಹೊತ್ತು ಹಿಡಿಯಬಹುದು. ಆ ಮೇಲೆ ಬೇಕಾದರೆ ಕ್ಲಬ್ಬಿಗೆ ಹೋಗುವೆಯಂತೆ. ನಾನು ಎಲ್ಲವನ್ನೂ ನಿನಗೆ ವಹಿಸಿಕೊಟ್ಟು ಬಿಟ್ಟು ನನ್ನ ತಂಗಿಯ ಮನೆಗೆ ಇವತ್ತೇ ಹೊರಟು ಹೋಗಬೇಕೆಂದಿದ್ದೇನೆ. ಇನ್ನು ಮುಂದೆ ಯಾರ ಅಂಕೆ ಸಂಕೆಗಳೂ ಇಲ್ಲದೆ ನೀನು ಸುಖವಾಗಿರಬಹುದು."

ರಾಯನು ಅಳುಅಳುತ್ತ ಅದಿಷ್ಟನ್ನೂ ಕೇಳಿ "ಹಾಗಾದರೆ. ." ಎಂದನು.

ಅವರು – ತಮ್ಮ ಗಂಭೀರಭಾವವು ಕೊಂಚವೂ ಸಡಲದಂತೆ, " ಹೌದಪ್ಪಾ ! ನನಗೆ ಹಣವು ಕೊಂಚ ಬರಬೇಕಾಗಿದೆ. ಅದು ಬರುವವರೆಗೂ ಅಲ್ಲಿ ನಮ್ಮ ಕೃಷ್ಣಾ ಮನೆಯಲ್ಲಿದ್ದು, ಆ ಮೇಲೆ ಕಾಶೀಗೆ ಹೋಗುತ್ತೇನೆ. " ಎಂದರು.

ರಾಯನ ಬಿಂಕ ಗಿಂಕಗಳೆಲ್ಲ ಎಲ್ಲಿಗೋ ಓಡಿಹೋದುವು: ತಟ್ಟನೆ ಓಡಿ ಹೋಗಿ ಆಕೆಯ ಕಾಲನ್ನು ಕಟ್ಟಿಕೊಂಡನು: " ಅಮ್ಮಾ ! ಬೇಡಮ್ಮಾ "

ನಾನು ಮಾಡಿದುದು ಶತಾಪರಾಧವಾಯಿತು. ಬೇಡವಮ್ಮಾ ! ಇನ್ನು ಮುಂದೆ ನೀನು ಹಾಕಿದ ಗೆರೆಯನ್ನು, ಹಾಕಿದ ಹುಲ್ಲುಕಡ್ಡಿಯನ್ನೂ ಸಹ ದಾಟುವುದಿಲ್ಲವಮ್ಮಾ ! ನೀನು ನನ್ನನ್ನು ಕಾಪಾಡಿದವಳು. ನನಗೆ ಈ ಪ್ರಪಂಚದಲ್ಲಿ ಇನ್ನಾರೂ ಇಲ್ಲವಮ್ಮಾ ! ಹೆತ್ತ ತಾಯಿಯನ್ನು ನಾನು ಕಂಡವನಲ್ಲ. ನೀನೇ ನನಗೆ ತಾಯಿ, ತಂದೆ, ಅಣ್ಣ, ತಮ್ಮ, ಇಷ್ಟ, ಬಂಧು, ದೈವ, ಎಲ್ಲವೂ ನೀನೇನಮ್ಮಾ ! ನಾನು ದುರಹಂಕಾರದಲ್ಲಿ ಆಡಿದ ಒಂದು ಮಾತನ್ನು, ಮಾಡಿದ ಒಂದು ತಪ್ಪನ್ನು ಸಹಿಸಿಕೊಳ್ಳಮ್ಮಾ. ಇಷ್ಟುದ್ದ ದವನನ್ನು ಇಷ್ಟುದ್ದದವನನ್ನಾಗಿ ಬೆಳೆಸಿದ ನಿನಗೆ ಇದೊಂದು ತಪ್ಪು ನುಂಗಿ ಕೊಳ್ಳುವುದು ಅಸಾಧ್ಯವೇನಮ್ಮಾ ! ಅಮ್ಮಾ ! ಇದೋ ನಾನು ನಿನ್ನ ಕಾಲು ಹಿಡಿದುಕೊಂಡಿದ್ದೇನೆ. ನನಗೆ ವರವನ್ನು ಕೊಡಮ್ಮಾ ! ನನ್ನನ್ನು ಕಾಪಾ ಡಮ್ಮಾ ! '' ಎಂದು ಹೇಳಿಕೊಂಡನು.

ಕಾವೇರಮ್ಮನವರ ಕಣ್ಣಲ್ಲಿಯೂ ನೀರು ಹರಿಯುತ್ತಿತ್ತು. ಆಕೆಗೂ ನಿಂತುಕೊಳ್ಳುವುದು ಸಾಧ್ಯವಾಗದೆ ಮಂಚವನ್ನು ಒರೆಸಿಕೊಂಡು ನಿಂತಿ ದ್ದರು. ಮಾತೃಭಾವವು ಮೂಡಿ,ಹೋಗಲಿ ತಪ್ಪುಮಾಡುವುದು ಎಲ್ಲೆಲ್ಲಿಯೂ ಉಂಟು. ಇದಕ್ಕಾಗಿ ಏಕೆ ಇಷ್ಟು?'' ಎನ್ನುತ್ತಿತ್ತು ಆದರೆ, ಹೆಣ್ಣು, ನನಗೆ ಅಪರಾಧವಾಯ್ತೆಂದು ಕೋಪಗೊಂಡಿರುವ ಹೆಣ್ಣು, ಆ ಮಾತೃಭಾವಕ್ಕೆಡೆ ಗೊಡಲಿಲ್ಲ. ''ಅಪರಾಧಿಯಿವನು'' ಎಂದು ಸಡೆತುಕೊಂಡೇ ನಿಂತಿತ್ತು.

ಮಾತೂ ಆ ಸೆಡಕಿನಿಂದಲೇ ಹೊರಟಿತು. ''ಯಾಕಪ್ಪಾ! ನನ್ನ ಕಾಲನ್ನು ನೀನು ಏಕೆ ಹಿಡಿದುಕೊಳ್ಳಬೇಕು? ನಾನು ಯಾರು ನಿನಗೆ. ನಾನೂ ನಿಮ್ಮ ಮನೆಯ ಒಬ್ಬ ಆಳು. ನೀನು ಏನೋ ದೊಡ್ಡ ಮನಸ್ಸು ಮಾಡಿ ನನ್ನನ್ನು ಅಮ್ಮಾ ಎನ್ನುತ್ತಿದ್ದೆ. ಈಗ ಅದು ಮುಗಿಯಿತು. ನಾನು ಮೊದಲಿನಂತೆ ಆಳೇ ಆದೆ. ನೀನು ನನಗೆ ತಿಂಗಳಿಗೆ ಮೂವತ್ತು ರೂಪಾಯಿ ಪೆನ್‌ಷನ್ ಕೂಡ ಕೊಟ್ಟಿದ್ದೀಯೆ. ಇನ್ನು ಅದಕ್ಕಿಂತ ಏನಾಗ ಬೇಕು?'' ಎಂದರು. ಮಾತು ಬಹಳ ಪ್ರಯತ್ನದಿಂದ ಮೃದುವಾಗ ಬೇಕೆಂದುಕೊಂಡೇ ಹೊರಡುತ್ತಿದ್ದರೂ ಒರಟು ಶಾರೀರದವರ ಸಂಗೀತ ದಂತೆ ಅಹಿತವಾಗಿಯೇ ಇತ್ತು.

ರಾಯನು ಏನು ಉತ್ತರ ಕೊಡಬೇಕೆಂದು ತಿಳಿಯಲಾರದೆ ಹೋದನು. ಕಾಲುಗಳನ್ನು ಇನ್ನೂ ಭದ್ರವಾಗಿ ಕಟ್ಟಿಕೊಂಡನು. ತನ್ನ ಅಪರಾಧವು ಗುರುತರವಾದುದೆಂದು, ತಾಯಿಗೆ ಬದಲು ತಾಯಾಗಿ ತನ್ನನ್ನು ಸಾಕಿದವಳನ್ನು ದಾದಿಯಂತೆ ಭಾವಿಸಬೇಕೆಂಬ ಯೋಚನೆಯೇ ಇಲ್ಲದೆ ಮಾಡಿದ ಕೆಲಸವು ಎಂತಹ ಅನರ್ಥಕಾರಿಯಾಯಿತೆಂಬುದನ್ನು ಮನಗಂಡು, ತನ್ನ ತಪ್ಪು ಎಷ್ಟು ಭಾರಿಯೆಂಬುದನ್ನು ತಿಳಿದು, ಹೆದರಿ, ಅಂಜಿ, ಆ ಪಾಪದ ಪ್ರಾಯಶ್ಚಿತ್ತವಿಲ್ಲಿದೆಯೆಂದು ಆಕೆಯ ಪದಕಮಲವನ್ನಾಶ್ರಯಿಸಿದವನಂತೆ, ಆ ಕಾಲುಗಳನ್ನು ಕಟ್ಟಿಕೊಂಡನು. ಕಣ್ಣೀರಿಂದ ಕಾಲು ತೊಳೆದು ತನ್ನ ಕಣ್ಣನ್ನು ಅರ್ಚಿಸಿ, ಪೂಜೆಯನ್ನು ಮಾಡಿದನು.

ಆ ಮೂಕ ಭಾವವು ಸ್ಪರ್ಶದಿಂದಲೇ ಆಕೆಯ ಹೃದಯವನ್ನು ಮುಟ್ಟಿತು. ಆದರೂ ಆ ಹೃದಯವನ್ನು ವಿಹ್ವಲ ಮಾಡಿದ್ದ ಕಿಸಿಸೇ ಇನ್ನೂ ಒಂದು ಗಳಿಗೆ ನಿಂತು ಮಾತನಾಡಿಸಿತು: "ಪಾಪ! ನಿನ್ನ ಖರ್ಚಿಗೆ ಸಾಲದೆ ಹೋದೀತು. ಈ ಮೂವತ್ತು ರೂಪಾಯೀ ತೆಗೆದುಕೊಳ್ಳಪ್ಪ. ನನ್ನ ಖರ್ಚಿಗೆ ಬೇಕಾದಷ್ಟು ಹಣ ಮಹಾರಾಯಾ ನನ್ನ ಗಂಡ ಕೊಟ್ಟು ಹೋಗಿದ್ದಾನೆ." ಎಂದು ಕಾಲು ಬಿಡಿಸಿಕೊಂಡು ಮುಂದೆ ಹೋಗಲು ಸಿದ್ಧವಾದರು.

ರಾಯನು "ಅಮ್ಮಾ! ಅಮ್ಮಾ! ನಾನು ಮಾಡಿದುದು ಬಹಳ ತಪ್ಪು, ಶತಾಪರಾಧ! ಮಹತ್ಪಾಪ! ಅಮ್ಮಾ! ಕ್ಷಮಿಸಮ್ಮಾ! 'ನಾನು ಹಾಲು ಹಾಕಿ ಬೆಳೆಸಿದ ಹಸುಳೆ ಇವನು'ಯೆಂಬುದನ್ನು ಮರೆಯಬೇಡಮ್ಮಾ! ನಾನು ತಪ್ಪು ಮಾಡಿದೆನೆಂದು ನೀನೂ ತಪ್ಪು ಮಾಡಬೇಕೇನಮ್ಮಾ! ಇದೋ! ನಿನ್ನ ಪಾದದಾಣೆ! ಇಂದಿನಿಂದ ನೀನು ಹೇಳಿದಂತೆ ಕೇಳದಿದ್ದರೆ ಕೇಳಮ್ಮಾ! ನೀನು ಶಾಂತಳಾಗಮ್ಮಾ! ನನಗೆ ಈ ಪ್ರಪಂಚದಲ್ಲಿ ನಿನ್ನ ಹೊರತು ಮತ್ತಾರೂ ಇಲ್ಲವೆಂಬುದನ್ನು ನೋಡಮ್ಮಾ! ಈ ಮುಳಿಸನ್ನು ಮರೆತು ಬಿಡಮ್ಮಾ! ತಪ್ಪಾಯಿತಮ್ಮಾ" ಎಂದು ಆಕೆಯ ಕೈಗಳನ್ನು ಹಿಡಿದುಕೊಂಡನು.

ಭಾವಾತಿರೇಕದಿಂದ ಬೆವರಿದ್ದ ಕೈಗಳಿಂದ ಅವನು ತನ್ನ ಕೈಗಳನ್ನು ಹಿಡಿದುಕೊಂಡುದು ಆಕೆಯ ಭಾವಪರಿವರ್ತನಕ್ಕೆ ಕಾರಣವಾಯಿತು. ತನ್ನ ದೇಹದ ಭಾರವನ್ನೆಲ್ಲ ಆಕೆಯ ಕೈಗೆ ಒಪ್ಪಿಸಿ ತಾನು ನಿಸ್ಸೂತ್ರಕನಾಗಿ ಆಕೆಯ ಪಾದಮೂಲವನ್ನಾಶ್ರಯಿಸಿದುದು ಆಕೆಗೆ ಆಗ ಮನವರಿಕೆಯಾಗಿ ಅವನು ಹಿಂದೆ ಮಗುವಾಗಿದ್ದಾಗ ತಾನೆತ್ತಿಕೊಂಡುದರ ನೆನೆಪಾಯಿತು. ಇದುವರೆಗೆ ಹಿಂದೆ ನಿಂತಿದ್ದ ಮಾತೃಭಾವವು ತಟ್ಟನೆ ಮುಂದೆ ಬಂದಿತು. ಸೆಡೆಕು ಸಡಲಿ, ಮನವು ಮೃದುವಾಗಿ, ವಾತ್ಸಲ್ಯವು ತಾನೇ ತಾನಾಗಿ, ಅವನ ವಯಸ್ಸು ಮೊದಲಾದವನ್ನು ಏನೂ ಗಮನಿಸದೆ, ಅವನನ್ನು ತಬ್ಬಿಕೊಳ್ಳಬೇಕು, ಎನ್ನಿಸಿತು. ಕೈಗಳು ತಾವಾಗಿ ಮುಂದುವರಿದು ಅವನ ಕಣ್ಣುಗಳನ್ನು ಒರೆಸಿದುವು. ಅಲ್ಲಿ ಒರೆಸಿದ ನೀರು ಆಕೆಯ ಕಣ್ಣಿಗೆ ಬಂದಂತೆ ಆಗಿ, ಕಣ್ಣು ನೀರನ್ನು ಕರೆಯಿತು. ಆಕೆಯೂ ಹಾಗೆ ಒಮ್ಮೆಗೇ ಆವರಿಸಿದ ವಾತ್ಸಲ್ಯ ಭಾವದ ಭಾರವನ್ನು ಸಹಿಸಲಾರದೆ, ಮಂಚದ ಮೇಲೆ ಕುಳಿತಳು. ರಾಯನು ಆಕೆಯ ತೊಡೆಯ ಮೇಲೆ ತಲೆಯನ್ನು ಒರಗಿಸಿ, ಸಣ್ಣ ಹುಡುಗನಂತೆ ಅಳುತ್ತ ಕುಳಿತನು. ಮರಿಯನ್ನು ರೆಕ್ಕೆಯಲ್ಲಿ ಹುದುಗಿಕೊಳ್ಳುವ ತಾಯಿ ಹಕ್ಕಿಯಂತೆ ಆಕೆಯೂ ಮಗನನ್ನು ತಬ್ಬಿಕೊಂಡಳು.

ಕೊಂಚ ಹೊತ್ತು ಹೀಗೆ ಮೌನವಾಗಿ ನೀರವವಾಗಿ ಇಬ್ಬರೂ ಕಣ್ಣೀರು ಕರೆದರು. ಕೊನೆಗೆ ತಾಯಿಯು "ಹಾಗಾದರೆ ಒಂದು ಮಾತು. ನಾನು ಇದನ್ನು ಮರೆತುಬಿಡುತ್ತೇನೆ. ನೀನು ಒಂದು ಕಾರ್ಯವನ್ನು ಮಾಡಲು ಒಪ್ಪಬೇಕು" ಎಂದಳು.

"ನೀನು ಏನು ಹೇಳಿದರೂ ಮಾಡುತ್ತೇನಮ್ಮ. ನೀನು ಮಾತ್ರ ಮನೆ ಬಿಟ್ಟು ಹೋಗಬೇಡ" ಎಂದು ಅಂಗಲಾಚಿ ಬೇಡಿಕೊಂಡನು. ಮಾತಿನಲ್ಲಿ ದೈನ್ಯವು ಮನೆಮಾಡಿತ್ತು. ಕಣ್ಣಿನಲ್ಲಿ ಹರಿಯುತ್ತಿರುವ ನೀರು ಪಶ್ಚಾತ್ತಾಪ ದಿಂದ ಕರಗಿರುವ ಹೃದಯದ ಸ್ಥಿತಿಯನ್ನು ತೋರುತ್ತಿತ್ತು. ಮುಖವು ಕಳೆಗೆಟ್ಟು, ತಾನು ಗೈದ ಪಾಪದ ಕಾಲಿಮೆಯನ್ನು ಕಂಡು ಅಂಜಿ ಕಾಂತಿ ಗೆಟ್ಟಂತಾಗಿತ್ತು.

ತಾಯಿಯು ಆ ಮುಖವನ್ನು ನೋಡಿ ಕರಗಿಹೋದಳು. ಆಕೆಯು ವಾತ್ಸಲ್ಯಪೂರ್ಣಳಾಗಿ, ತಲೆಯನ್ನು ಸವರುತ್ತಾ ಮೌನವಾಗಿ ಅವನನ್ನು ತನ್ನ ಆಲಿಂಗನದಿಂದ ಸಮಾಧಾನ ಮಾಡಿ "ರಂಗಣ್ಣ! ನಾನು ಹೇಳಿದ ಹಾಗೆ ಕೇಳು. ಹೋಗಿ ಪ್ರಸ್ತಮಾಡಿಕೊಂಡು ಆ ಹುಡುಗಿಯನ್ನು ಮನೆ ತುಂಬಿಸಿಕೊ. ಹೀಗೆ ಬಿಟ್ಟಿರುವುದು ಸರಿಯಲ್ಲ. ಆ ಕಂದನೆಷ್ಟು ಕೊರಗು ತ್ತಿದೆಯೋ" ಎಂದರು.

ರಾಯನು ನಿಸ್ತೇಜನಾಗಿ, ಏನೂ ಉತ್ತರ ಹೇಳಲರಿಯದೆ, ಹೆಂಡ ತಿಯ ಕಾಗದವನ್ನು ತೆಗೆದು ತಾಯಿಯ ಕಯ್ಯಲ್ಲಿಟ್ಟನು: "ಯಾವ ಮೊಕ ಹೊತ್ತು ಹೋಗಲಮ್ಮಾ?" ಎಂದನು.

ಆಕೆಯು ಕಾಗದವನ್ನು ಓದಿದಳು: ಪೂರ್ಣವಾಗಿ ಓದಿದಳು: ಮತ್ತೂ ಒಮ್ಮೆ ಓದಿದಳು. ಅಪಾರವಾಗಿ ಬಂದ ನಗುವನ್ನು ತಡೆಯಬೇಕೆಂದು ಆಕೆಯು ಮಾಡಿದ ಪ್ರಯತ್ನವು ಸಫಲವಾಗಲಿಲ್ಲ. ದೊಡ್ಡದಾಗಿ ನಕ್ಕು ಬಿಟ್ಟಳು. "ರಂಗಣ್ಣ! ಸೇರಿಗೆ ಸವಾ ಸೇರು. ನನ್ನ ಆಸೆ ಸಫಲವಾಯಿತು. ಇಂತಹ ಹೆಂಡತಿಯೇ ನಿನಗೆ ಬರಬೇಕು. ಆಗ ನೀನು ಸರಿಹೋಗುವೆ ಎಂದು ಹಾರೈಸುತ್ತಿದ್ದೆ. ನಿನಗೆ ಹೀಗೇ ಆಗಬೇಕು" ಎಂದರು. ರಾಯನಿಗೆ ಆ ನಗು, ಆ ಹಾಸ್ಯ, ಎರಡೂ ಬೇಡವಾಗಲಿಲ್ಲ.

ಕೊನೆಗೆ ತಾಯಿಯು ಉಪಾಯವನ್ನು ಹೇಳಿಕೊಟ್ಟಳು. ನಿನ್ನೆ ಬಂದಿದ್ದ ಶ್ರೀಕಂಠಯ್ಯನವರ ಹೆಸರಿನಲ್ಲಿ ತಂತಿ ಕಳುಹಿಸುವುದು ಎಂದು ಗೊತ್ತಾಯಿತು. ತಂತಿಯನ್ನು ಕಳುಹಿಸಿಯಾಯಿತು, ಉತ್ತರವೂ ಬಂದಿತು. ಕಾವೇರಮ್ಮನವರು ಸಂಭ್ರಮದಿಂದ ಸರ್ವಸಿದ್ಧರಾಗಿ ಮಗನೊಡನೆ ಹೊರಟರು.

---

## ಸೋತವರು ಯಾರು ?

ರಾಮರಾಯರ ಮನೆಯಲ್ಲಿ ಈ ದಿನ ಬಹು ಸಂಭ್ರಮ. ಆ ಊರಿನಲ್ಲಿಯೂ ಅಷ್ಟೆ! ಜಾತ್ರೆಯ ದಿನ ಇರುವಷ್ಟು ಸಂಭ್ರಮ, ಉತ್ಸಾಹ. ಎಲ್ಲರಿಗೂ ಒಂದು ತೂಕ ಆದರೆ, ಆ ಜಹಗೀರದಾರ ದಂಪತಿಗಳಿಗೇ ಒಂದು ತೂಕ. ಅವರ ಹೃದಯಶಲ್ಯವೊಂದು ನಿವಾರಣೆಯಾಗಿ ಅವರ ಸೌಖ್ಯಭವನಕ್ಕೆ ಚಿನ್ನದ ಕಳಸವಿಕ್ಕಿದಂತಾಗಿದೆ. ಆದರೆ ಒಂದೇ ಒಂದು ಆಶ್ಚರ್ಯ! ಇಷ್ಟೆಲ್ಲಕ್ಕೂ ಕಾರಣನಾದ ಕಂಠೀ ಮಾತ್ರ ಬಂದಿಲ್ಲ. ಆತನನು ಯಾವಾಗಲೂ ಹೀಗೇ! ಏನಾದರೊಂದು ವಕ್ರ ಮಾಡುವುದು. ಪ್ರಸ್ತುತ ದಿನ ಕರೆಯುವುದಕ್ಕೆ ಹೋಗುವುದಕ್ಕೆ ಕಂಠಿಯನ್ನೇ ಕಳುಹಿಸಬೇಕು. ಕಂಠಿಯು ಹೋಗಿ ಎಲ್ಲರ ಮನೆಯಲ್ಲೂ ಉತ್ಸವದ ಸಂಭ್ರಮ ವಿಜೃಂಭಣೆಗಳನ್ನೂ ತಾನೂ ಶ್ರಮಪಟ್ಟು ಎಲ್ಲವನ್ನೂ ಸಾಧಿಸಿದುದನ್ನೂ ಹೇಳಿಕೊಂಡು ಬಂದರೆ ಚೆನ್ನ. ತಮ್ಮ ದುಃಖದ ಆಳವೂ ತಮ್ಮ ಸೌಭಾಗ್ಯದ ಪರಮಾವಧಿಯೂ ಎಲ್ಲರಿಗೂ ತಿಳಿದು ಉತ್ಸವದ ಹೆಚ್ಚಳವು ಇನ್ನೂ ಹೆಚ್ಚುವುದೆಂದು ಅವರ ಒಳ ಒಳ ಮನಸ್ಸು.

ಯಾರಿಗಾಗಿ ಇಷ್ಟು ಸಂಭ್ರಮವಾಗಿ ಎಲ್ಲವೂ ನಡೆಯುತ್ತಿದೆಯೋ ಅವರಿಗೂ ಮನಸ್ಸು ಏಕೋ ಕೊಂಚ ಕೊಂಚ ಗಾಬರಿಯಾದಂತಿದೆ. ಕಣ್ಣಿನ ನೋಟವನ್ನು ಸಾಕ್ಷಿಯಾಗಿ ಅಂಗೀಕರಿಸಿದರೆ, ಒಬ್ಬರನ್ನೊಬ್ಬರು ಹುಡುಕುವಂತಿರುವಂತಿದೆ. ಆದರೆ ಆ ಹುಡುಕುವ ನೋಟದ ಹಿಂದೆ, ಕೊತ್ತವಾಲನನ್ನು ಹುಡುಕುವ ಕಳ್ಳನ ಅಂಜಿಕೆಯೂ ಅಡಗಿರುವಂತಿದೆ. ಏಕೋ ಏನೋ ಬೆಚ್ಚಿದಂತಿದೆ. ಆದರೂ ಬೆಚ್ಚಿಗಿಂತಲೂ ಮೆಚ್ಚೇ ಅಧಿಕವಾಗಿ, ಭೀತಿಗಿಂತಲೂ ಪ್ರೀತಿಯೇ ಅಧಿಕವಾಗಿದೆ. ಅವರವರ ನೋಟಗಳು ಒಂದನ್ನೊಂದು ಹುಡುಕಿಕೊಂಡು ಬಂದು ಸಂಧಿಸುತ್ತವೆ. ಆ ಸಂಧಿಯಲ್ಲಿ ಇಬ್ಬರಿಗೂ ಪುಳಕವಾಗುತ್ತದೆ: ಇಬ್ಬರೂ ನಾಚುತ್ತಾರೆ. ತಮ್ಮ ಹೃದಯದೊಳಗೆ ತಾವು ನಾಚಿದುದನ್ನು ಇತರರು ಯಾರು ಕಂಡರೋ ಎಂದು

ಮತ್ತೆ ನಾಚಿ ಅತ್ತಿತ್ತ ನೋಡುತ್ತಾರೆ. ಅವರಿಬ್ಬರಲ್ಲಿ ಯಾರು ಗಡಿಯಾರ ವನ್ನು ನೋಡಿದರೂ ತಪ್ಪದೆ ನಿಟ್ಟುಸಿರು ಬರುತ್ತದೆ.

ಸಾವಿತ್ರಮ್ಮನವರಿಗೆ – ಮಗಳಿಗೆ ಮಾಡುತ್ತಿರುವ ಸೇವೆಯಲ್ಲಿ ಅತಿ ಶಯವಾದ ಪ್ರೀತಿಸಂಭ್ರಮ ಶ್ರದ್ಧೆಗಳು. ರಾಮರಾಯನಿಗೆ, 'ಅಳಿಮೈಯ' ನಿಗೆ ಏನು ಉಪಚಾರವು ಕಡಿಮೆಯಾದೀತೋ, ಮಾಯವಾಗಿರುವ ಮುಳಿಸು ಮತ್ತೆಲ್ಲಿ ತಲೆದೋರುವುದೋ ಎಂದು ದಿಗಿಲು; ಮೈಯೆಲ್ಲ ಕಣ್ಣಾಗಿ ನೋಡಿಕೊಳ್ಳುತ್ತಿದ್ದಾರೆ. ಗಳಿಗೆಗೊಂದು ಸಲ "ಕಂಠೀ ಇದ್ದಿ ದ್ದರೆ ಚೆನ್ನಾಗಿತ್ತು. ಎಲ್ಲಿ ಹೋಗಿ ಕುಳಿತುಬಿಟ್ಟಿದ್ದಾನೋ" ಎಂದು ಹಂಬಲಿಸುತ್ತ ಅಡಿಗಡಿಗೆ ಕಾವೇರಮ್ಮನವರನ್ನು "ತಾಯಿ! ಏನು ಅಪ ರಾಧವಾಗಿದ್ದರೂ ಕ್ಷಮಿಸಿಬಿಡಿ. ನಾವೆಲ್ಲ ನಿಮ್ಮ ಮಕ್ಕಳು ಎಂದುಕೊಳ್ಳಿ. ಏನು ಲೋಪವಾದರೂ ಮನಸ್ಸಿಗೆ ಹಾಕಿಕೊಳ್ಳಬೇಡಿ. ಏನೋ ದೊಡ್ಡ ಮನಸ್ಸು ಮಾಡಿ ಸೆರೆ ತಪ್ಪಿಸಿದಿರಿ. ನನಗೂ ನಮ್ಮವಳಿಗೂ ಉಪಚಾರ ಹೇಳುವುದಕ್ಕೇ ಬರದು" ಎನ್ನುತ್ತಾರೆ. ಅವರಿಗೆ ಅಳಿಯನ ಕಡೆಯವ ರೆಂದು ಯಾರೂ ಬಂದಿಲ್ಲವಲ್ಲ ಎಂದು ಒಂದು ಅಸಮಾಧಾನ. ಸದ್ಯಕ್ಕೆ ಬರದಿರುವುದೇ ಒಂದು ಅನುಕೂಲವಾಯಿತು ಎಂದು ಇನ್ನೊಂದು ಸಮಾಧಾನ.

ಕಾವೇರಮ್ಮನವರು ಅಂದು ಸಂತೋಷದ ಮೂರ್ತಿಯಾಗಿದ್ದಾರೆ. ಇಂದು ಅವರ ಆನಂದಕ್ಕೆ ಪಾರವೇ ಇಲ್ಲ. ಅವರಿಗೆ ಸೊಸೆಯನ್ನು ಕಂಡು ಆಗಿರುವ ಸಮ್ಮೋದಕ್ಕೆ ಅಂತ್ಯವೇ ಇಲ್ಲದೇ ಹೋಗಿದೆ. "ಎಂತಹ ಹೆಣ್ಣು, ಏನು ರೂಪ, ಎಂತಹ ಧೈರ್ಯ! ಸೌಭಾಗ್ಯಲಕ್ಷ್ಮಿಯ ಹಾಗಿದ್ದಾಳೆ. ರಂಗ ಣ್ಣನ ಅದೃಷ್ಟವೇ ಅದೃಷ್ಟ! ಊರಿಗೆ ಹೋಗುತ್ತಲೂ ಒಂದು ಭಾರಿಯ ಆರತಕ್ಷತೆ ಮಾಡಿ, ಒಂದೊಂದು ಸೇರಿನ ಚಿಗಳಿ ಉಂಡೆ ಬಾಗಿನ ಇಡ ಬೇಕು" ಎಂದು ಮುಂದಿನ ಆಲೋಚನೆಯಲ್ಲಿ ಮಗ್ನರಾಗುತ್ತಾರೆ. ಒಮ್ಮೊಮ್ಮೆ ಆ ಹುಡುಗಿಯನ್ನು ನೋಡಿ, ಸೇರಿರುವ ಜನರನ್ನು ಕಂಡು, "ಮಗುವಿಗೆ ಎಲ್ಲಾದರೂ ಕಣ್ಣೆಸರಾದೀತು" ಎಂದು ಅಂಜುತ್ತಾರೆ.

ಕೊನೆಗೂ ಅವಳು ಹಸೆಯ ಮೇಲೆ ಕುಳಿತಿದ್ದವಳನ್ನು ಕರೆಸಿಕೊಂಡು, ದೃಷ್ಟಿಯ ಬೊಟ್ಟನಿಟ್ಟು ಕಳುಹಿಸಿಕೊಟ್ಟರು. ಅದುವರೆಗೂ ಅವರಿಗೆ ಸಮಾಧಾನವಾಗಲಿಲ್ಲ,

ಶಾಸ್ತ್ರಗಳೆಲ್ಲವೂ ಸಾಂಗವಾಗಿ ನೆರವೇರಿದುವು. ಊಟ ಉಪಚಾರಗಳ ಸಂಭ್ರಮದಲ್ಲಿ ಸಂಜೆಯೂ ಆಯಿತು. ಆ ಮೂವರು ಹಿರಿಯರಿಗೆ ಆ ತರುಣ ದಂಪತಿಗಳನ್ನು ಎಷ್ಟು ಸಲ ನೋಡಿದರೂ ತೃಪ್ತಿಯಿಲ್ಲ. ಸಂಜೆಗೆ ವಧುವನ್ನು ಅಂದವಾಗಿ ಸಿಂಗರಿಸಿದರು. ಮತ್ತೆ ಸಂಜೆಯ ಆರತಕ್ಷತೆಗಳು ನಡೆದುವು. ಕಾವೇರಮ್ಮನವರು ಸೊಸೆಯನ್ನು ಆದರದಿಂದ ಕರೆದು ಏಕಾಂತವಾಗಿ ಕುಳ್ಳಿರಿಸಿಕೊಂಡು "ತಾಯೀ! ನಿನ್ನ ಕಾಗದ ನಾನೂ ನೋಡಿದೆ. ಅಷ್ಟು ಹಟ ಹಿಡಿಯಬೇಡ ತಾಯಿ! ಹೆಣ್ಣು ಸೋತು ಸೋಲಿಸಬೇಕಮ್ಮ! ಇದನ್ನು ಮನಸ್ಸಿನಲ್ಲಿಟ್ಟುಕೊಂಡಿರು. ಗಂಡಸು ಆನೆಯ ಹಾಗೆ. ನಾವು ಅಂಕುಶದ ಹಾಗೆ. ಅದನ್ನು ಮರೆಯದಿರು. ತಾಯಿ! ನಿನ್ನ ಹೊಟ್ಟೆ ಸಾವಿರ ಕಾಲ ತಣ್ಣಗಿರಲಿ" ಎಂದು ಸಾವಿರ ಹರಕೆ ಹರಸಿ ಕಳುಹಿಸಿಕೊಟ್ಟರು. ಉಳಿದ ಶಾಸ್ತ್ರಗಳೂ ನಡೆದುವು. ವೀಳ್ಯವನ್ನು ತೆಗೆದುಕೊಂಡು ಬಂದ ಸುವಾಸಿನಿಯರೆಲ್ಲರೂ, "ಒಳ್ಳೆಯ ರತೀಮನ್ಮಥರಂತೆ ಇದ್ದಾರೆ. ಎಲ್ಲಾದರೂ ಚೆನ್ನಾಗಿರಲಮ್ಮಾ!" ಎನ್ನುವವರೇ!

ದಂಪತಿಗಳು ಏಕಾಂತದಲ್ಲಿ ನಿಂತರು. ಇಬ್ಬರಿಗೂ ಎದೆಯು ಡವಡವ ಎನ್ನುತ್ತಿದೆ. ಒಂದು ಗಳಿಗೆ ಮೌನ. ಹೆಣ್ಣು ತಲೆಯನ್ನು ತಗ್ಗಿಸಿಕೊಂಡು ಕುಳಿತಿದೆ. ಗಂಡು ಆಂತರಿಕವಾಗಿ, ಅಕೃತ್ರಿಮವಾಗಿ ಅಪಾರವಾಗಿರುವ ತಾರುಣ್ಯದ ಮೋಹಾವೇಶದಿಂದ ನೋಡುತ್ತಿದೆ. ಮಾತನಾಡುವುದಕ್ಕೆ ಏಕೋ ಹಿಂಜರಿಯುತ್ತಿದೆ. ಆದರೂ ಮೋಹವೆಂತು ಸುಮ್ಮನೆ ಕುಳ್ಳಿರಿಸುವುದು? ಗಂಡೇ ಮಾತನಾಡಿಸಿತು.

"ತುಂಗಾ!"

ಹೆಣ್ಣು ಮೌನವಾಗಿತ್ತು. ಆದರೂ ಆ ಮೌನವೇ ಗಂಡನ್ನು ಕೈ ಹಿಡಿದೆಳೆದಂತೆ ಎಳೆಯಿತು. ಗಂಡು ಆವೇಶದ ಭರದಲ್ಲಿ ಮೇಲೆ ಬಿದ್ದು ಹೆಣ್ಣನ್ನು

ತನ್ನ ತೆಕ್ಕೆಯಲ್ಲಿ ತೆಗೆದುಕೊಂಡು ಗಾಢವಾಗಿ ಚುಂಬಿಸಿತು. ಪ್ರಕೃತಿ ದೇವಿಯು ಹೆದರಿ ಹಿಂಜರಿಯುತ್ತಿದ್ದ ಪ್ರಾಣಿಗಳನ್ನು ಒಟ್ಟು ಸೇರಿಸಿದಳು. ಮೋಹಮುದ್ರೆಯು ಎರಡು ಹೃದಯಗಳನ್ನೂ ಏಕವಾಗುವಂತೆ ಬೆಸೆ ಯಿತು. ಆ ಪ್ರಾಣಿಗಳಿಗೆ ಭೂತಭವಿಷ್ಯತ್ತುಗಳ ಯೋಚನೆಯೇ ಬರಲಿಲ್ಲ. ಆ ಗಳಿಗೆಯಲ್ಲಿ ಅವರ ಪಾಲಿಗೆ ಸ್ವರ್ಗವೇ ಇಳಿದು ಬಂದಂತಿತ್ತು.

* * * *

ಮರುದಿನ ರಂಗರಾಯನು ಮಹಡಿಯ ಮೇಲಿನಿಂದ ಇಳಿದು ಬರು ತ್ತಿರುವಾಗ, ಅಪರಿಚಿತವಲ್ಲದ ಕಂಠಧ್ವನಿಯೊಂದು ಕೇಳಿಸಿತು. ರಾಯನು ಆ ಧ್ವನಿಯನ್ನು ಕೇಳಿ ಬೆಚ್ಚಿದನು. ಕೆಳಗಿಳಿದು ಬರುವುದಕ್ಕೆ ನಾಚುಗೆ ಯಾಯಿತು. ಎಷ್ಟೋ ಹೊತ್ತು ಕಾದು ಕುಳಿತಿದ್ದು ಹೆಂಡತಿಯನ್ನು ಕರೆ ಯಿಸಿಕೊಂಡನು.

"ಪುಣ್ಯಾತ್ಮಗಿತ್ತಿ! ನನ್ನ ಮಾನವನ್ನು ಉಳಿಸಿಕೊಡು" ಎಂದು ಅಂಗಲಾಚಿದನು. ಪಾಪ! ಅವಳಿಗೆ ನಾಚುಗೆ. ಗಂಡನ ಕೈಯಲ್ಲಿ ಮಾತ ನಾಡುವುದಕ್ಕೆ ಬಾಯೇ ಬರದು. ಆದರೂ ಗಂಡನು ತನ್ನನ್ನು ಅಪ್ಪಿಕೊಂಡು ಅಂಗಲಾಚಿಕೊಳ್ಳುತ್ತಿರಲು, ಆಗುವುದಿಲ್ಲವೆನ್ನುವುದೆಂತು?

ರಾಯನು ಶ್ರೀಕಂಠಯ್ಯನವರ ವಿಷಯದಲ್ಲಿ ತಾನು ನಡೆದುಕೊಂಡ ಅವಿವೇಕದ ವರ್ತನೆಯನ್ನು ಹೇಳಿಕೊಂಡು, ಆ ಅಪರಾಧಕ್ಕೆ ತಕ್ಕ ಪ್ರಾಯ ಶ್ಚಿತ್ತವನ್ನು ಮಾಡಿಕೊಳ್ಳಲು ಸಿದ್ಧನಾಗಿರುವುದನ್ನೂ ಹೇಳಿದನು. "ನೀನೂ ಜೊತೆಯಲ್ಲಿ ಬಾ. ನಾನೊಂದು ಜೊತೆ ಪಂಚೆಯನ್ನು ತಂದಿದ್ದೇನೆ. ಅದನ್ನು ತೆಗೆದುಕೊಂಡು ಹೋಗಿ ಅವರ ಪಾದಕ್ಕೆ ಒಪ್ಪಿಸಿಬಿಡೋಣ. ನನ್ನನ್ನು ಕ್ಷಮಿಸುವಂತೆ ನೀನು ಹೇಳು" ಎಂದು ಕೇಳಿಕೊಂಡನು.

ತುಂಗಳು ಒಂದು ಗಳಿಗೆ ಸಣ್ಣಗೆ ನಕ್ಕಳು. ಗಟ್ಟಿಯಾಗಿ ನಕ್ಕರೆ ಇತರರು ಕೇಳಿ ಹಾಸ್ಯ ಮಾಡುವರೆಂದು ಅವಳಿಗೆ ಭೀತಿ. ಕೊನೆಗೆ, ಗಂಡನ ಮುಖವನ್ನು ನೋಡಿ "ಅಯ್ಯೋ!" ಎನ್ನಿಸಿ ನಗುವನ್ನು ನಿಲ್ಲಿಸಿ, "ಒಂದು ಮಾತಿಗೆ ನೀವು ಒಪ್ಪಿದರೆ ಆಗಬಹುದು" ಎಂದಳು.

ರಾಯರು "ಏನೋ ಸಿಡಿಲೋ ಗುಡುಗೋ?" ಎಂದುಕೊಂಡು ಆಗಲಿ" ಎಂದನು.

ಹುಡುಗಿಯು ತಡೆತಡೆದು ಕೇಳಿದಳು:" ನೀವು ಹಾಗೆ ಆ ಕಾಗದ ವೇಕೆ ಬರೆದಿರಿ?" ರಾಯರು ನೇರವಾಗಿ ಏನೂ ಉತ್ತರ ಹೇಳಲಾರದೆ "ನೀನು ಹಾಗೆ ನೇರಿಗೆ ನವಾನೇರಾಗಿ ಉತ್ತರ ಬರೆಯಲಿ ಎಂದು. ಈಗ ನಿಮ್ಮ ಕಂಠೀಮಾವನಿಗೂ ನನಗೂ ರಾಜೀಮಾಡಿಸು ನಡೆ" ಎಂದನು.

ಹುಡುಗಿಯು ಗಂಡನ ಮುಖವನ್ನು ನೋಡಿ ನಕ್ಕಳು. ಅವಳ ಅಧ ರವು ಮತ್ತೆ ಸನೀತ್ಕಾರವಾಗಿ ಚುಂಬಿತವಾಯ್ತು. ಹುಡುಗಿಯು ರಾಜೀ ಮಾಡಿಸಲು ಹೊರಟಳು.

ಮತ್ತೊಂದು ಗಳಿಗೆಯೊಳಗಾಗಿ ಗಂಡಹೆಂಡಿರಿಬ್ಬರು ಬಂದು ಕಂಠೀ ಮಾವನಿಗೆ ನಮಸ್ಕಾರ ಮಾಡಿದರು. ಶ್ರೀಕಂಠಯ್ಯನವರ ಮುಂದೆ ಎರಡು ಜೊತೆ ಉಡುಗೊರೆಗಳು ತಟ್ಟೆಗಳಲ್ಲಿ ಮಂಡಿಸಿದ್ದುವು.

ಎತ್ತ ನೋಡಿದರೂ ಎಲ್ಲರೂ ಶ್ರೀಕಂಠಯ್ಯನವರ ಸಾಹಸವನ್ನು ಹೊಗಳುವವರೇ! ಆದರೆ ಅವರು ಮಾತ್ರ ತುಟಿ ಪಿಟಕ್ಕೆನ್ನದೆ ಕುಳಿತಿದ್ದರು. ಜಹಗೀರುದಾರ ರಾಮರಾಯರು "ಈಗಲೀಗ ಚೆನ್ನಾಯಿತು ಕಂಠೀ! ತುಂಗಾ ಗಂಡನನ್ನು ಕರೆದುಕೊಂಡು ಬಂದು ನಮಸ್ಕಾರ ಮಾಡುತ್ತಿದ್ದಾಳೆ. ಆಶೀರ್ವಾದ ಮಾಡಬೇಡವೇ?" ಎಂದರು.

ಶ್ರೀಕಂಠಯ್ಯನವರು ನಿದ್ದೆಯಿಂದ ಎಚ್ಚೆತ್ತವರಂತೆ "ಹೌದಪ್ಪಾ! ಆದದ್ದೆಲ್ಲಾ ಒಳಿತೇ ಆಯಿತು. ಆಶೀರ್ವಾದ ಚೆನ್ನಾಗಿ ಮಾಡೋಣ" ಎಂದು ಮನಃಪೂರ್ವಕವಾಗಿ ಆಶೀರ್ವಾದ ಮಾಡಿದರು.

---

# ಇದು ನಿಜವೇ?

ತಾ|| ೧೬–೭ . . . .

"ಇವೊತ್ತು ಮನಸ್ಸಿಗೆ ಬಹಳ ಬೇಸರ. ಬೆಳಗಿನಿಂದಲೂ ಇದೇ ಯೋಚನೆ. ಕಾಫಿ ಚೆನ್ನಾಗಿರಲಿಲ್ಲ. 'ಹದಿನೆಂಟು ಮೊಳ ಉಡುವ ತಪ್ಪಿಗಾದರೂ ಕಾಫಿ ಮಾಡುವುದು ಕಲಿಯಬಾರದೆ? ಇನ್ನೇನು ಅಡುಗೆಯಿಲ್ಲ ತಿಂಡಿಯಿಲ್ಲ' ಎಂದುಬಿಟ್ಟರು. ಹಾಳ ಅಡುಗೆಯವನಿಗೆ ಏನು ರೋಗ ಬಂದಿತ್ತೊ? ಇವೊತ್ತು ಏನೋ ನೆಗಡಿಯಾಗಿತ್ತಂತೆ. ಕಾಫಿ ಕುಡಿದಾಗ ನನಗೂ ಅಳು ಬಂತು. ಇನ್ನು ಮೇಲೆ, ಕಾಫಿ ನಾನೇ ಮಾಡಬೇಕು. 'ಇವರ ಕೈಯಲ್ಲಿ ನಿನ್ನ ಕಾಫೀ A 1 ಚಿನ್ನ' ಎನ್ನಿಸಿಕೊಳ್ಳಲೇಬೇಕು. ಅದೇನು ಮಹಾ! ಬ್ರಹ್ಮ ವಿದ್ಯೆ ಕೆಟ್ಟು ಹೋಯಿತೆ?"

"ನಮ್ಮ ದುರದೃಷ್ಟ ಏನು ಹೇಳಬೇಕು? ನಾವೇನಾದರೂ ಕಲಿಯಬೇಕು ಎಂದರೆ, ನಮ್ಮಲ್ಲಿ ಒಂದು ಪುಸ್ತಕವುಂಟೆ? ಈ ದಿನ ಲೈಬ್ರರಿಯೆಲ್ಲ ತಲೆ ಕೆಳಗುಮಾಡಿ ನೋಡಿದೆ. ಕಾಫಿ ಮಾಡುವುದು ಹೇಗೆ ಎನ್ನುವ ವಿಷಯದಲ್ಲಿ ಒಂದಾದರೂ ಪುಸ್ತಕವಿರಬೇಕಲ್ಲ! ಆದರೇನು? ಸೋತೆ ಎಂದು ಕೈ ಮುಗಿಯುವವಳಾಗಿದ್ದರೆ, ಆ ರೀತಿ ಬೇರೆಯಾಗುತ್ತಿತ್ತು! ಅಡುಗೆಯವನಿಗೆ ಒಂದು ರೂಪಾಯಿ ಗುರುದಕ್ಷಿಣೆ ಕೊಟ್ಟು ಕಾಫೀ ಮಾಡುವುದು ಕಲಿತಿದ್ದೇನೆ. ಒಂದೇ ಗಂಟೆಯೊಳಗಾಗಿ, ನಾನು ಮಾಡಿ ನೋಡಿದೆ, ಕುಡಿದು ನೋಡಿದೆ, ನಿಜವಾಗಿಯೂ ಚೆನ್ನಾಗಿತ್ತು."

"ಛೇ! ಹೆಣ್ಣಿನ ಬುದ್ಧಿ, ತನಗೆ ಬೇಕಾದಾಗ, ಸೋಲುವುದೂ ಉಂಟೆ? ಅಡುಗೆಯವನಿಗೆ ಈ ದಿನ ಅದೆಷ್ಟು ಥಳುಕು ಮಾಡಿಬಿಟ್ಟೆ

" ಆಚಾರ್ರೆ! ಪಾಪ! ಈ ಸೋನೆ ಕಾಲದಲ್ಲಿ ನೀವು ಬೆಳಿಗ್ಗೆ ಅಷ್ಟು ಹೊತ್ತಿಗೆ, ಏಕರಿ ಎದ್ದು ಬರಬೇಕು? ನಾನು ಬೆಳಗಿನ ಕಾಫಿ ನೋಡಿಕೊಳ್ಳುತ್ತೇನೆ. ನೀವು ಏಳೂವರೆ ವೇಳೆಗೆ ಬನ್ನಿರಿ" ಎಂದೆ. ಅವನಿಗೆ ಮರಣ ಸಂತೋಷವಾಗಿ ಹೋಗಿ, "ತಾಯೀ! ನೀವು ನನ್ನ ಭಾಗದ ದೇವರು!" ಎಂದು ಹಿರಿ ಹಿರಿ ಹಿಗ್ಗಿ ಹೋದ. ಈ ಗಂಡಸು ಜಾತಿ! ಅದೇನು ಕೆಟ್ಟ ಜಾತಿ, ಮಂಗಳಾರತಿ ತೆಗೆದುಕೊಂಡರೆ ಉಷ್ಣ! ತೀರ್ಥ ತೆಗೆದುಕೊಂಡರೆ ಶೀತ! ನನಗೆ ಅವನು ತನ್ನ ಸಂತೋಷದಲ್ಲಿ ಉಪ್ಪಿಟ್ಟು ಮಾಡುವುದೂ ಹೇಳಿಕೊಟ್ಟಿದ್ದಾನೆ! ಇರಲಿ, ನಾಳೆ ಒಂದು ತಮಾಷೆಗೆ ಅವಕಾಶ."

ತಾ॥ ೧೭ — ೭ . . . .

"ನನ್ನ ಪ್ಲಾನ್ ಬಹಳ ಚೆನ್ನಾಗಿ ಕೆಲಸ ಮಾಡಿತು. ಅವರಿಗಿಂತ ಅರ್ಧ ಗಂಟೆ ಮುಂಚೆ, ದಿನ ದಿನ ಏಳುತ್ತಿದ್ದುದಕ್ಕಿಂತ ಒಂದು ಗಂಟೆ ಮುಂಚೆ ಎದ್ದೆ. ಹೊದೆದಿದ್ದ ರಗ್ ಎಸೆದು ಮಂಚ ಬಿಟ್ಟು ಕೆಳಕ್ಕಿಳಿದು ಬರುವುದಾದರೂ ಹೇಗೆ ಎನ್ನಿಸಿತು. ಅದನ್ನು ಮಾಡದಿದ್ದರೆ, ಅವರ ಕೈಯಲ್ಲಿ ಶಹಬಾಸ್‌ಗಿರಿ ಪಡೆಯುವದಾದರೂ ಹೇಗೆ?"

"ಎದ್ದು ಅವರ ಮುಖ ನೋಡಿದೆ. ಇತ್ತ ಕಡೆ ತಿರುಗಿದರೆ ಪುಟ್ಟು ತೊಟ್ಟಿಲಲ್ಲಿ ಸುಖವಾಗಿ ಮಲಗಿದ್ದಳು. ಬೆಳಗಿನ ಹೊತ್ತು ನಿದ್ದೆ ಮಾಡುತ್ತಿರುವ ಮುಖಗಳು ಅಷ್ಟು ಮನೋಹರವಾಗಿರುತ್ತವೆಯೇನು? ಥೇ! ಇನ್ನು ಯಾವುದಕ್ಕಲ್ಲದಿದ್ದರೂ ಆ ಮುಖಗಳು ನೋಡುವುದಕ್ಕಾದರೂ ಬೆಳಗ್ಗೆ ಹೊತ್ತಿಗೆ ಮುಂಚೆ ಏಳಬೇಕು. ಇನ್ನು ಮೇಲೆ ಬೇಕಾದುದಾಗಲೀ ಅವರಿಗಿಂತ ಮುಂಚೆಯೇ ಏಳಬೇಕು. ಈ ಸಿದ್ಧಾಂತ ತಪ್ಪಕೂಡದು"

"ಈ ದಿನ ಕಾಫೀ ಉಪ್ಪಿಟ್ಟು ಮಾಡಿದೆ. ನನಗಿನ್ನೂ ದಿಗಿಲು. ನಾನೇ ಮೊದಲು ರುಚಿ ನೋಡಿದೆ. ಶಬರಿ ತನ್ನ ಎಂಜಲು ರಾಮನಿಗೆ ಕೊಡಬಹುದಂತೆ, ನಾನು ನನ್ನ ಎಂಜಲೂ ಅಲ್ಲ, ಕೊಂಚ ಬಾಯಿಗೆ ಹಾಕಿಕೊಂಡುದು ಅವರಿಗೆ ಕೊಡಬಾರದೆ? ರುಚಿ ನೋಡಿದ್ದು ಎಷ್ಟು

ಒಳ್ಳೆಯದಾಯಿತು. ಉಪ್ಪಿಟ್ಟಿಗೆ ಉಪ್ಪು ಹೆಚ್ಚು ಜಿಡ್ಡು ಕಮ್ಮಿ. ನಾನು ಬಾಯಿಗಷ್ಟು ಹಾಕಿಕೊಂಡೆನೋ ಮಾಸ ಉಳಿಯಿತು. ನಾಲಗೆಯ ರುಚಿಗೆ ತಕ್ಕಹಾಗೆ ಮಾಡುವುದಕ್ಕೆ ಬರದೆಹೋದಾಗ ನಾಲಗೆಯ ಸಹಾಯ ಪಡೆದರೆ ತಪ್ಪೇನು ?"

"ಬೆಳಗೆಲ್ಲ ನನ್ನ ಸಂತೋಷಕ್ಕೆ ಪಾರವೇ ಇಲ್ಲ. ಉಪ್ಪಿಟ್ಟು ಕಾಫೀ ತೆಗೆದುಕೊಂಡು 'ಎಕ್ಸಲೆಂಟ್ ಚಿನ್ನಾ' ಎಂದವರು ಅದೇನು ಮಾಡಿ ಬಿಟ್ಟರು ! ಬರಸೆಳೆದು ಅಪ್ಪಿಕೊಂಡು ಚುಂಬಿಸಿ – ಇದೇಕೆ ಈ ಸಂಸ್ಕೃತದ ಮಾತು, ಕನ್ನಡದ ಮಾತೇ ಇರಲಿ – ತುಟಿ ಕಚ್ಚಿಬಿಟ್ಟರು. ಇವೊತ್ತು ನನಗೆ ಷಾಕ್ ಹೊಡೆದಹಾಗಾಯಿತು. ಎರಡು ಮೂರು ವರ್ಷದಿಂದ ಇವರ ಜೊತೆಯಲ್ಲಿ ಸಂಸಾರ ಮಾಡಿಕೊಂಡಿದ್ದೇನೆ. ಇದುವರೆಗೆ ಏಕೆ ಹೀಗಾಗ ಲಿಲ್ಲ ? ಬಹುಶಃ ಬೆಳಗೆದ್ದು ಕಾಫೀ ಉಪ್ಪಿಟ್ಟು ಭಕ್ತಿಯಿಂದ ಮಾಡಿಟ್ಟುದರ ಫಲವೋ ಏನೋ? ಇನ್ನು ಮೇಲೆ ಬೇಕಾದ್ದಾಗಲಿ. ನಾನೇ ಕಾಫೀ ಉಪ್ಪಿಟ್ಟು ಮಾಡುವುದು. ಬೆಳಗ್ಗೆ ಮಧ್ಯಾಹ್ನ ಅವರ ಸಂತೋಷದ ಮುಖ ಕಂಡರೆ 'ಇನ್ನೂ ಒಂದು ಸಲ ನೋಡೋಣ' ಎನ್ನಿಸುತ್ತದೆ. ಆದರೆ ಒಂದು ಕಟ್ಟು ಮಾಡಿಕೊಬೇಕು. ಬೆಳಗೆದ್ದು ತಬ್ಬಿಕೊಂಡು ಮುತ್ತಿಟ್ಟು ಕೊಳ್ಳೋದು ಮಾತ್ರ ಕೂಡದು."

"ಇವೊತ್ತು ಬೆಳಗಿನಿಂದ ಅದೇನೋ ಎಲ್ಲೆಲ್ಲಿ ನೋಡಿದರೂ ಸಂತೋಷ ತಾನೇ ತಾನಾಗಿದೆ. ಅದೇ ಮುಖ ! ಅದೇ ಮುತ್ತು ಛೀ ! ಇದೇನು ! ನನಗೆ ವಯಸ್ಸು ಬಂದೂ ಫಲವಿಲ್ಲ. ಒಂದು ಮಗುವಿನ ತಾಯಿ ! ಆದರೂ ಹೀಗೇ ! ಇಲ್ಲ ಹೀಗೇ ಇದ್ದರೆ ಚೆನ್ನ ! ಇವೊತ್ತು ಪುಟ್ಟೂ ಕೂಡ ಅಳಲಿಲ್ಲ. ನಿತ್ಯವೂ ಇವೊತ್ತಿನ ಹಾಗೇ ಏಕೆ ಇರಬಾರದು ? ಇರಲಿ !"

ತಾ॥ ೧೮–೭....

"ಹೌದು. ಕೊಂಚ ಪ್ರಯತ್ನ ಪಟ್ಟರೆ ಮನೆಯೆಲ್ಲ ನಂದನವನ ವಾಗುವ ಹಾಗೆ ಮಾಡಿಕೊಳ್ಳಬಹುದು. ಈ ದಿನ ಏಳುವ ವೇಳೆಗೆ ಮಳೆ

ಅನ್ನೊ ಮಗಳು ಬಂದು ಬಿಟ್ಟಿದ್ದಳು. ಆದರೂ ಎದ್ದೆ. ತಿಂಡಿ ಕಾಫೀ ಆಯಿತು. ಈ ದಿನ ಸೀ ತಿಂಡಿ ಮಾಡಿದ್ದುದು ತಪ್ಪು. ಮಳೆ ಹೊತ್ತಿನಲ್ಲಿ ಚಳಿ ಹಿಡಿದಾಗ ಸೀ ತಿಂಡಿ ಅಷ್ಟು ಚೆನ್ನಿಲ್ಲ. ಏನೋ ಮೊದಲಷ್ಟು ಬಾಯಿಗೆ ಹಾಕಿಕೊಂಡುದು ಮೂಸ ಉಳಿಸಿತು. ಈ ದಿನವೂ ನನಗೆ ಉಡುಗೊರೆ ಸಿಕ್ಕಿತು. ''

'' ಇವರು ಮೊದಲಿನಿಂದಲೂ ಹೀಗೇ ಇದ್ದರೇ ಎಂದು ಇವೊತ್ತು ಒಂದು ಯೋಚನೆ ಬಂದುಬಿಟ್ಟಿದೆ. ಬೆಳಗೆದ್ದರೆ ಏನೋ ಆ ಮಾತು ಈ ಮಾತು, ನ್ಯೂಸ್ ಪೇಪರ್, ಆ ಆಟ, ಈ ಆಟ, ಇದಿಷ್ಟೇ ಮಾತು. ನನ್ನ ಕೈಯಲ್ಲಿ ಒಂದು ಗಳಿಗೆ ಮಾತನಾಡುವುದಕ್ಕೆ ಕೂಡ ಪುರಸತ್ತಿಲ್ಲ. ಈ ದಿನ ಒಂದು ಗಳಿಗೆ ಕುಳಿತುಕೊಂಡು ಮಾತನಾಡುವವರೆಗೂ ಬಿಡಲೇ ಇಲ್ಲ. ಅದೇನೇನು ಗ್ರಹಗಳು ಅದೆಷ್ಟೆಷ್ಟು ಒಲಿದಿದ್ದವೋ ಏನೋ ? ಆ ಮಗು ವನ್ನೂ ಬೇರೆ ಮುದ್ದಿಸಿದ್ದೇ ಮುದ್ದಿಸಿದ್ದು. ಏನಾದರೂ ಆಗಲಿ. ಅವರು ಹೀಗೇ ಇರುವ ಹಾಗೆ ಮಾಡಿಕೊಳ್ಳಬೇಕು. ''

'' ಇದೇ ಏನೋ ಮುತ್ತಿನಂತಹ ಸಂಸಾರ ಎನ್ನುವುದು. ಆಯಿತು. ಆದೇಕೆ ? ಅವರೇಕೆ ತಮ್ಮ ಪಾಡಿಗೆ ತಾವು ಇರಬಾರದು ! ನಮ್ಮ ಪಾಡಿಗೆ ನಾವು ಸುಖವಾಗಿರಬಾರದೆ ? ಏನೋ ಗೋಳು. ನಮ್ಮ ಸಂತೋಷ ಇನ್ನೊಬ್ಬರ ಕೈಯಲ್ಲಿ. ಅವರು ನಕ್ಕರೆ ನಾವೂ ನಗುವುದು. ಅವರು **' ಶಂ '** ಎಂದು ಇದ್ದರೆ, ಅದೇಕೋ ! ಅದೇನೋ ! ನಮ್ಮ ಮನಸ್ಸೆಲ್ಲ ಬರಿಬರಿದು. ಇದೇಕೆ ಹೀಗೆ ? ''

'' ಯಾವುದು ಎಲ್ಲಾದರೂ ಹೋಗಲಿ. ಹೀಗೇ ಇರುವ ಹಾಗೆ ಮಾಡಿಕೊಂಡು ಬಿಡಬೇಕು. ಇಷ್ಟು ಸಾವಿರ ಇನ್‌ಷ್ಯೂರೆನ್ಸ್ ಕಂಪೆನಿ ಗಳು ಹುಟ್ಟಿವೆ. ಗಂಡ ಹೆಂಡಿರು ಸುಖವಾಗಿರುವ ಹಾಗೆ ಮಾಡಿಕೊಡುವ ಇನ್‌ಷ್ಯೂರೆನ್ಸ್ ಕಂಪೆನಿ ಒಂದೂ ಹುಟ್ಟಲಿಲ್ಲ. ಇಲ್ಲ ! ಈ ಸಂತೋಷ, ಅಂಗಡಿಯ ತಿಂಡಿ ಹಾಗೆ ಕೊಂಡು ಕೊಂಡು ಬರುವುದಕ್ಕೆ ಸಾಧ್ಯವಾಗಿ ದ್ದಿದ್ದರೆ, ಬಹುಶಃ ಅದಕ್ಕಿಷ್ಟು ಬೆಲೆಯೇ ಇರುತ್ತಿರಲಿಲ್ಲವೇನೋ ? ''

" ಬಹಳ ದಿನದ ಆಶೆ ಮತ್ತೆ ತಲೆಯೆತ್ತಿದೆ. ಆರು ತಿಂಗಳಿಂದ ಸಂಸಾರ ವೆಲ್ಲ ನಾನೇ ನೋಡಿಕೊಂಡು ಹೋಗಬೇಕು ಎಂದು ಬಹಳ ಆಶೆ. ಅವೊತ್ತು ಕೇಳಿದ್ದಕ್ಕೆ ಚೆನ್ನಾಗಿ ಛೀ ಮಾರಿಯಾಯಿತು. ಆ ದಿಗಿಲು ಇನ್ನೂ ಇದೆ: ಇವೊತ್ತು ಕೇಳಲಿಲ್ಲ, ಇರಲಿ. ನಾಳೆ ಧೈರ್ಯ ಮಾಡಿಬಿಡುತ್ತೇನೆ. "

" ಮರೆತಿದ್ದೆ. ಇವೊತ್ತು ಸಮಾಜದಲ್ಲಿ ಬಹಳ ಹೊತ್ತು ಕುಳಿತಿರಲ್ಲು ಆಗಲಿಲ್ಲ. ಹಾಳು ಮನಸ್ಸು ಮನೆಯ ಕಡೆಯೇ ಎಳೆಯುತ್ತಿತ್ತು ! ಅವರೂ ಕ್ಲಬ್ಬಿನಿಂದ ಬೇಗೇನಾದರೂ ಬಂದು ಬಿಟ್ಟರೆ ಎಂದು ಮನೆಯ ಯೋಚ ನೆಯೇ ಯೋಚನೆಯಾಗಿತ್ತು. ನಾನು ಬಂದುದೂ ಬಹಳ ಒಳ್ಳೆಯದಾಯ್ತು. ನಿತ್ಯವೂ ಬರುವುದಕ್ಕಿಂತ ಅವರು ಅರ್ಧ ಗಂಟೆ ಮುಂಚೆ ಬಂದಿದ್ದರು. ಅವರ ಮುಖ ನೋಡಿ ಕಾಫಿ ಮಾಡೋಣ ಎನ್ನಿಸಿತು. ಅವರನ್ನು ಕೇಳದೆ ಮಾಡಿಯೇ ಬಿಡಬೇಕಾಗಿತ್ತು. ಕೇಳಿದ್ದಕ್ಕೆ ಬೇಡ ಎಂದುಬಿಟ್ಟರು. ಇನ್ನು ಮುಂದೆ ಇವರನ್ನು ಕೇಳಿದರಲ್ಲವೆ ? ನನಗೆ ತೋರಿದುದನ್ನು ಮಾಡಿಬಿಡು ವುದು. ತೆಗೆದುಕೊಂಡು ಹೋಗಿ ಮುಂದಿಟ್ಟು, ಅವರು ಅದನ್ನು ತೆಗೆದು ಕೊಳ್ಳುವ ಹಾಗೆ ಮಾಡಿಯೇ ಬಿಡುವುದು. ಇದೇ ಸರಿ. ಪ್ರತಿಯೊಂದಕ್ಕೂ ಈ ಮೀನ ಮೇಷ ಎಣಿಸುವುದು ಯಾರ ಕೈಯಲ್ಲಾದೀತು ?"

ತಾ॥ ೧೯—೭. . . .

" ಈ ದಿನ ಬೆಳಗ್ಗೆ ಏಳುತ್ತಿದ್ದ ಹಾಗೆಯೇ ಅವರ ಮುಖ ನೋಡಿದೆ. ಏಕೋ ಏನೋ ಆಶೆ ಬಹಳವಾಯ್ತು. ನನ್ನ ಸ್ವಾಮಿಯನ್ನು ನಾನೇಕೆ ಮುದ್ದಿಸಬಾರದು ಎನ್ನಿಸಿತು. ಇನ್ನೂ ದೀಪವಿತ್ತು. ನಾಚಿಕೆಯಾಯ್ತು. ಮುದ್ದಿಸುವುದು ಸಾಧ್ಯವಾಗಲಿಲ್ಲ. ಇತ್ತ ಕಡೆಗೆ ತಿರುಗಿ ಮಗುವಿಗೆ ಸುಖವಾದ ಮುತ್ತು ಕೊಟ್ಟೆ. ಆದರೇನು ? ಮನಸ್ಸಿಗೆ ತೃಪ್ತಿಯಾಗಲಿಲ್ಲ. ಹಾಳು ಮನಸ್ಸು ! ಕೆಟ್ಟ ಮನಸ್ಸು ! ಅದಕ್ಕೆ ಏನು ಬೇಕು ಎಂದರೆ ಅದೇ ಆಗಬೇಕು. ಬ್ರೆಡ್ ಬೇಕು ಎಂದಾಗ ಚಾಕಲೆಟ್ ಕೊಟ್ಟರೂ ಅದಕ್ಕೆ ಬೇಡ. ಈಚೆಗೆ ಬಂದು ಒಲೆ ಹೊತ್ತಿಸಿದೆ. ಮೊಕವನ್ನು ತೊಳೆದುಕೊಂಡೆ.

ಇಷ್ಟು ಹೊತ್ತಾದರೂ ಇನ್ನೂ ಆಸೆ ಮಾಯವಾಗಲಿಲ್ಲ. ಮತ್ತೆ ಅಲ್ಲಿಗೆ ಹೋದೆ, ಆದುದಾಗಲಿ ಎಂದು ಈ ಸಲ ಬಗ್ಗಿದೆ. ಇನ್ನೇನು? ನನ್ನ ಆಶೆಯು ತೀರಬೇಕು. ಆ ವೇಳೆಗೆ ಸರಿಯಾಗಿ ಅವರು ಕಣ್ಣು ಬಿಟ್ಟು ಬಿಟ್ಟರು. ನನಗೆ ಹೇಗೆ ಹೇಗೋ ಆಗಿ ಹೋಯ್ತು. ದೇವರು ದೊಡ್ಡವನು. ಅದೇನು ನನ್ನ ಆಶೆ ಅವರಿಗೆ ತಿಳಿದು ಹಾಗೆ ಆಯಿತೋ? ಅಥವಾ ಅವರಿಗೂ ನನಗೆ ಬಂದ ಹಾಗೆ ಆಶೆಯು ಬಂದಿತೋ ಅಂತೂ ಅವರೇ ಕೈ ಹಾಗೆ ಕುತ್ತಿಗೆ ಮೇಲೆ ಹಾಕಿ ಮುಖವನ್ನು ಹಿಡಿದು ಚುಂಬಿಸಿ ಬಿಟ್ಟರು. ನಿಜ! ಗಂಡನೆಂದರೆ ದೇವರು ಎನ್ನುತ್ತಾರಲ್ಲ ಅವರ ಮಾತು ನಿಜ. ಅದೊಂದು ಸಣ್ಣ ಉಪಚಾರ ನನ್ನನ್ನು ಎಷ್ಟು ಸುಖಿಯನ್ನಾಗಿ ಮಾಡಿತು! ಇಂತಹ ಸೌಖ್ಯವು ಅವರ ಕೈಯಲ್ಲಿ. ಅವರು ದೇವರಲ್ಲವೇ?''

''ಈ ದಿನ ಬಹಳ ಸಾಹಸ ಮಾಡಿದೆ. ಬೆಳಿಗ್ಗೆ ತಿಂಡಿ ತಿನ್ನುವಾಗ ಜೊತೆಯಲ್ಲಿಯೇ ಇದ್ದೆ. ಅವರು ಅದೇಕೋ ನನ್ನನ್ನು ನೋಡಿ ''ಏನು ಸೊಗಸುಗಾತಿಯಾಗುತ್ತಿದ್ದೀಯಲ್ಲ?'' ಎಂದರು. ನಾನು ''ಇಷ್ಟು ದಿನವೂ ಇಲ್ಲದ ಮುಖ ಇವೊತ್ತು ಬಂತೇ?'' ಎಂದೆ. ಅವರು ಅಬ್ಬಾ–ಪೂರಾ ಘಾಟಿ, ಏನೋ ಚೇಷ್ಟೆ ಮಾಡಿ, ''ಮುಖವೇನೋ ಇದ್ದೇ ಇತ್ತು. ಈ ಭಾವವಿರಲಿಲ್ಲ'' ಎಂದರು. ತಿಂಡಿ ತಟ್ಟೆ ಅತ್ತ ಇಟ್ಟು ಕನ್ನಡಿ ಮುಂದೆ ನಿಲ್ಲಿಸಿ ''ನೋಡಿಕೋ'' ಎಂದರು. ಅದೇ ಮುಖ! ಅದೇ ಕಣ್ಣು ಮೂಗು, ಅದೇ ಕುಂಕುಮ, ಇನ್ನೇನೂ ಇಲ್ಲ. ಮುಖವೇನೋ ಕೊಂಚ ಕೆಂಪಗಿತ್ತು. ಕೊನೆಗೆ ತಿಳಿಯಿತು. ಕುರುಳು ಚೆಲ್ಲಿತ್ತು. ಈ ದಿನ ಕೆಂಡದ ಒಲೆ ಮುಂದೆ ಕುಳಿತು ಬೀಸುತ್ತಿದ್ದಾಗ ಗಾಳಿ ತಗಲಿ ಬಾಚಿದ್ದ ಕುರುಳು ಕೆದರಿತ್ತು. ಹೌದು. ಚೆದುರಿದ ಕುರುಳು ನನ್ನ ಮುಖಕ್ಕೆ ಬಹಳ ಅಂದ! ಅಯ್ಯೋ! ಹಗಲೂ ರಾತ್ರಿ ಕನ್ನಡಿ ಮುಂದೆ ನಿಂತು ನಿಂತು ಶೃಂಗಾರ ಮಾಡಿಕೊಂಡಿದ್ದೂ ಮಾಡಿಕೊಂಡಿದ್ದೆ. ಇದಿಷ್ಟು ನನಗೆ ತಿಳಿದಿರಲಿಲ್ಲ. ಇವೊತ್ತು ಅವರು ಹೇಳಿದ ಮೇಲೆ! ಇನ್ನು ಮುಂದೆ ಇದೊಂದು ಗುಟ್ಟು ಸಿಕ್ಕಿತು. ಇರಲಿ.''

" ಇದೇ ಸಮಯ ಸಾಧಿಸಿ ಕೇಳೋಣ ಎಂದುಕೊಂಡೆ. ಆದರೆ ವ್ಯಾಪಾರವಾದೀತು ಎಂದು ದಿಗಿಲಾಯಿತು. ಅವರು ಮನಃಪೂರ್ವಕವಾಗಿ ವಿಶ್ವಾಸವಾಗಿ ಬಾಯಿತುಂಬಾ ಮಾತನಾಡಿಸುತ್ತಿದ್ದರೆ, ನಾನು ತಕ್ಕಡಿ ತೂಗುವ ಬುದ್ಧಿಯಿಂದ, ನನಗೆ ಅದು ಕೊಡಿ, ಇದು ಕೊಡಿ ಎಂದು ಕೇಳಲೆ? ಆಗಲಿಲ್ಲ. "

" ಮಧ್ಯಾಹ್ನವೂ ಹಾಗೇ ಆಯಿತು. ಈಗ ಬೇಕೆಂದು ಕುರುಳನ್ನು ಸಣ್ಣಗೆ ಕೆದರಿದ್ದೆ. ಕುಂಕುಮವೂ ಅದೇಕೋ ಏನೋ ಎಂದಿನಂತೆ ಇರುವುದಕ್ಕಿಂತ ಕೊಂಚ ಸಣ್ಣವಾಗಿತ್ತು. ಒಳಗಿನ ಆಸೆ. ಅವರು ಮೆಚ್ಚುವರು. ಮೆಚ್ಚಿದರೊಂದು ಉಡುಗರೆ, ಉಪಚಾರ, ಆಗುವುದು ಎಂದು ಆಸೆ. ಅವರಿಗೆ ಎಲ್ಲಿಯೋ ಹೋಗುವ ಅವಸರ. ಒಂದು ಸಲ ಮುಖ ನೋಡಿದರು. ಸಣ್ಣಗೆ ನಕ್ಕು, ಅದೇನೋ ಒಂದು ತರಹ ನೋಡಿ, ಹೊರಟುಹೋದರು. ನನಗೇಕೋ ಮುಖ ಪೆಚ್ಚಾಯಿತು. ಇನ್ನು ಒಂದು ಸೆಕೆಂಡು, ಅಥವಾ ಒಂದು ಮಿನೀಟ್, ಇದ್ದು ನನ್ನನ್ನು ಒಂದು ಸಲ ಹಾಗೆಂದು ಹೋಗಿದ್ದರೆ ಏನು ಹೋಗುತ್ತಿತ್ತೋ? "

" ಈ ದಿನ ಸಮಾಜವು ಬೇಕಾಗಲಿಲ್ಲ. ಯಾರು ಏನು ಮಾತನಾಡಿಸಿದರೂ ಏನೋ ಏಕೋ ಬರಿಬರಿದು. ಎಲ್ಲವೂ ಹಾಳು ಹಾಳು ಸುರಿಯುತ್ತಿದ್ದಂತೆ ತೋರುತ್ತಿದೆ. ಸಮಾಜದಲ್ಲಿ ಬಹಳ ಹೊತ್ತು ನಿಲ್ಲುವುದಕ್ಕೆ ಸಾಧ್ಯವಾಗಲಿಲ್ಲ. ಬಂದುಬಿಟ್ಟೆ. ಅವೊತ್ತು ಬಂದಾಗ ಮನಸ್ಸು ಕುಣಿಯುತ್ತಿತ್ತು. ಇವೊತ್ತು ಏಕೋ ಏನೋ ಕಬ್ಬಿಣದ ಗುಂಡು ಇದ್ದಂತೆ ಇದೆ. "

" ಮನೆಗೆ ಬಂದರು. ಕೊಂಚ ಹೊತ್ತಾಗಿತ್ತು. ಅದಷ್ಟು ಹೊತ್ತೂ ಏನೋ ಗಂಟೆ, ಗಂಟೆಗಳಲ್ಲ, ವರ್ಷಗಳು ಕಳೆದಂತಿತ್ತು. ಸಂಜೆ ಏನೋ ಕಾವಳ ಬಲಿದು ಕೊಂಚ ಚಳಿಯಾಗುತ್ತಿದ್ದಂತೆ ಇತ್ತು. ಆದುದಾಗಲಿ ಎಂದು ಕಾಫಿ ಡಿಕಾಕ್ಷನ್ ಮಾಡಿಟ್ಟಿದ್ದೆ. ಅವರು ಬಂದು ಬಟ್ಟೆ ಬಿಚ್ಚುತ್ತಿದ್ದ ಹಾಗೆಯೇ ಒಂದು ಲೋಟಾ ಬಿಸಿ ಬಿಸಿ ಕಾಫಿ ತೆಗೆದುಕೊಂಡು ಹೋಗಿ ಇಟ್ಟೆ. ನನ್ನ ದೇವರು ಒಲಿಯಿತು. ನನಗೆ ಪ್ರಸಾದವು ಸಿಕ್ಕಿತು. "

ಎನ್ನುವುದರಲ್ಲಿ ಒಂದು ಸೌಖ್ಯವಿದೆ. ಅಯ್ಯೋ ನನ್ನ ದೈವವೇಕೆ ಇಂತಹ ಭಾಗ್ಯವನ್ನು ನನಗೆ ಇದುವರೆಗೆ ತಪ್ಪಿಸಿತ್ತು ?''

'' ಇವೊತ್ತು ಸಮಾಜಕ್ಕೆ ಹೋಗಲಿಲ್ಲ. ಮನೆಯ ಕೆಲಸವೇ ಸರಿ ಹೋಗಿದೆ. ಈಗ ಅವರು ಬರುವ ವೇಳೆಗೆ ಎಲ್ಲವೂ ಸಿದ್ಧವಾಗಿರಬೇಕು. ಅದೇ ಪ್ರಯತ್ನದಲ್ಲಿ ಎಲ್ಲ ವೇಳೆಯೂ ಕಳೆದುಹೋಯಿತು.''

'' ನಿನ್ನೆ ಅವರು ಬರುವ ವೇಳೆಗೆ ಇನ್ನೂ ಕೊಂಚ ಏನೇನೋ ಉಳಿದಿತ್ತು. ಬಿಟ್ಟು ಹೋಗುವುದಕ್ಕೂ ಸಾಧ್ಯವಿಲ್ಲ. ಇರುವುದಕ್ಕೂ ಸಾಧ್ಯವಿಲ್ಲ. ಕೊನೆಗೆ ಅವರನ್ನು ಒಬ್ಬರನ್ನೇ ಬಿಟ್ಟರೆ, ಅವರು ನಾವೆಲ್ಲಾ ಓದುವುದಕ್ಕೆ ಕುಳಿತುಕೊಂಡಾರೆಂದು ಹೆದರಿ, ಎಲ್ಲವನ್ನೂ ಆಳುಗಳೇ ಮಾಡಿಕೊಳ್ಳಲಿ ಎಂದುಬಿಟ್ಟದ್ದು ಬಿಟ್ಟ ಹಾಗೇ ಬಿಟ್ಟು, ಮಹಡಿಯ ಮೇಲಕ್ಕೆ ಓಡಿ ಹೋದೆ. ಅಷ್ಟರಲ್ಲಿಯೇ ಅವರು ನಾವೆಲ್ಲಾ ಓದುವುದಕ್ಕೆ ಆರಂಭಿಸಿಬಿಟ್ಟಿದ್ದಾರೆ. ಅಬ್ಬಾ ! ಈ ಗಂಡಸರಿಗೆ ಅದೆಷ್ಟು ಅಸಮಾಧಾನ ! ಒಂದು ಗಳಿಗೆ ತಡೆಯಬಾರದಾಗಿತ್ತೆ ? ಎಲ್ಲವೂ ಸೂತ್ರದಲ್ಲಿ ಕಟ್ಟಿ ಕೊಯ್ದ ಹಾಗಿರಬೇಕು ಎಂದರೆ ಸಾಧ್ಯವೇ ?''

''ಅಧಿಕಾರ ನಮ್ಮದು ಎಂದು ಹೇಳಿ ನಾವೆಲ್ಲನ್ನು ಕಿತ್ತೆಸೆದೆ. ಅವರು, 'ಆಗಬಹುದು ಮಹಾಸ್ವಾಮಿ ! ಆದರೆ, ಒಂದು ಹೋದರೆ ಮತ್ತೊಂದು ಇರಬೇಕು. ಅದರಿಂದ—' ಎಂದರು. ನಾನು ಇದೋ ನಾವೆಲ್ಲಿಗೆ ಬದಲು, ಎಂದು ಅಡಕೆಲೆ ಕೊಡುವುದಕ್ಕೆ ಹೋದೆ. ಅವರು ' ಈ ಹಸೀ ತಾಂಬೂಲ ಬೇಡ ' ಎಂದರು. ' ಇನ್ನು ಬಿಸಿ ತಾಂಬೂಲವೆಂದರೇನು ?' ಎಂದು ಕೇಳಿದೆ. ಅಯ್ಯೊ ! ರಾಮ ! ಈ ಗಂಡುಸರಿಗೆ ನಾಚುಗೆಯೇ ಇಲ್ಲ. ನಾನು ಅಗಿದು ಕೊಡಬೇಕಂತೆ ! ಮೊದಲು ಥೂ ಎನ್ನಿಸಿತು. ಆ ಮೇಲೆ ಅಂಥಾದ್ದು ನನಗೂ ಬೇಕು ಎನ್ನಿಸಿತು. ಆದರೆ ಕೇಳುವ ಧೈರ್ಯವಿಲ್ಲ.''

'' ನನ್ನ ಚಿಕ್ಕ ಮನೆಯೊಳಕ್ಕೆ ಇನ್ನು ಮೇಲೆ ನಾವೆಲ್ಲಾ ತರಕೂಡದು ಎಂದು ಆಜ್ಞೆ ಮಾಡಿಬಿಡಲೇ ? ಎಂದು ಒಂದು ಮನಸ್ಸು. ಈಗಲೇ ಹೇಳಲಾರದೇ ಹೋದೆ. ಇರಲಿ. ಇನ್ನೊಂದು ದಿವಸ ಹೇಳುತ್ತೇನೆ. ಈ

ಗಂಡುಸರು ಏಕೆ ನಮಗೆ ಬೇಕಾದುದನ್ನು ತಿಳಿದುಕೊಂಡು ತಾವೇ ಮಾಡಬಾರದು ? ನಮಗೆ ಬೇಕಾಗುವುದನ್ನೆಲ್ಲ ಬಾಯಿ ಬಿಟ್ಟು ಹೇಳುವುದು ಎಂತು ಸಾಧ್ಯ ? ಅಂಗಡಿ ಕೆಟ್ಟು ಹೋಯಿತೇ ? ಬೇಕಾದುದೆಲ್ಲ ಬಾಯಿ ಬಿಟ್ಟು ಹೇಳಿ ತೆಗೆದಿಡು ಎಂದು ಹೇಳುವುದಕ್ಕೆ ? ''

ತಾ॥ ೨೫ — ೭ . . . .

'' ಮೂರು ನಾಲ್ಕು ದಿನದಿಂದಲೂ ನಾನು ಡೈರಿ ಬರೆದಿಲ್ಲ : ನನೂ ಜಕ್ಕೆ ಹೋಗಿಲ್ಲ. ಅವರು ಮನೆಯಲ್ಲಿರುವವರೆಗೂ ಅವರ ಯೋಗ ಕ್ಷೇಮ. ಅವರು ಹೊರಟುಹೋದರೆ ಮನೆಯ ಯೋಗ ಕ್ಷೇಮ ! ಈ ನಡುವೆ ಪುಟ್ಟು. ಸದ್ಯ — ದೇವರ ದಯ. ಅಳುವ ಮಗುವಾಗಿದ್ದರೆ ಗತಿಯೇನು ? ಆದರೂ ನಿನ್ನೆಯ ರಾತ್ರಿ ಮಾತ್ರ ನನಗೆ ಬಹಳ ಕೋಪ ಬಂತು. ಯಾವೊತ್ತೂ ಇಲ್ಲದೆ, ಅದೇಕೆ ಆ ಮಗು ಅಷ್ಟು ಅಳಬೇಕು ? ಆದ ಮಕ್ಕಳು ಗಂಡ ಹೆಂಡಿರ ನಡುವೆ ಗೋಡೆಯಾಗುವ ಹಾಗಿದ್ದರೆ ಈ ಮಕ್ಕಳು ತಾನೇ ಯಾರಿಗೆ ಬೇಕು ? ಬಹುಶಃ ದೇವರು ಮಕ್ಕಳನ್ನು ಕೊಡುವುದು ಗಂಡನ ಮೇಲಿನ ಅಭಿಮಾನ ಕಡಿಮೆಯಾಗಲಿ ಎಂದೋ ಏನೋ ? ಅದೇನಾದರೂ ಆಗಲಿ. ನಿನ್ನೆಯ ರಾತ್ರಿ ಅನುಭವ ಬೇಡ. ''

'' ಈ ದಿನ ಅವರು ಎಂತಹ ಮಾತನಾಡಿದರು ! ಅವರಿಗೆ ನಾನೂ ಬೇಕಂತೆ ! ನಾವೆಲ್ಲೂ ಬೇಕಂತೆ ! ನನಗೆ ಬೇಗ ನಿದ್ದೆ ಬಂದುಬಿಡುತ್ತದೆ ಯಂತೆ ! ಅವರಿಗೆ ನಿದ್ದೆ ಬರುವವರೆಗೂ ನಾನು ಎಚ್ಚರವಾಗಿರುವುದಿಲ್ಲವಂತೆ ! ಅದಕ್ಕೋಸ್ಕರ ನಾವೆಲ್ಲು ಬೇಕಂತೆ ! ನನಗೆ ಹೇಳಬಾರದೆ ? ನಾನು ಎಚ್ಚರ ವಾಗಿರುವುದಿಲ್ಲವೆ ? ಬಹುಶಃ ಅದಲ್ಲ ಕಾರಣ. ನಾನು ಎಚ್ಚರವಾಗಿರುವ್ರು ದಲ್ಲ ಪ್ರಶ್ನೆ ! ಅವರ ಮನಸ್ಸಿಗೆ ಮೆಚ್ಚುವಂತೆ ಮಾತನಾಡುವುದಕ್ಕೆ ನಮಗೆ ಬರುವುದಿಲ್ಲ. ಈ ಬರೆವಣಿಗೆಗಾರರಾದರೆ, ಅಲ್ಲಿಂದ ಇಲ್ಲಿಂದ ಕದ್ದಾ ದರೂ ಏನೇನೋ ಮಾಡಿ ಮುಖಮಲ್ಲಿನ ಗೌಸು ಹಾಕಿದ ಹಾಗೆ ಮಾಡಿ ಬರೆದುಬಿಡುತ್ತಾರೆ. ಗಂಡ ಹೆಂಡಿರಿಗೆ ನಡುವೆ ತಮ್ಮ ಗ್ರಂಥವು ಬರುವ್ರು

ದೆಂದು ಅವರಿಗೆ ತಿಳಿಯುವ ಹಾಗೆ ಮಾಡಬೇಕು. ಅಥವಾ ನಾನೇ ಏಕೆ ಚೆನ್ನಾಗಿ ಮಾತನಾಡುವುದು ಕಲಿಯಬಾರದು ?"

"ಹೌದು. ಮಾತು ಮನುಷ್ಯನಿಗಿರುವ ಮೊದಲನೆಯ ಅಸ್ತ್ರ. ಚೆನ್ನಾಗಿ ಮಾತನಾಡುವವರನ್ನು ಕಂಡರೆ ಎಲ್ಲರೂ ಒಲಿಯುತ್ತಾರೆ. ನಮ್ಮ ಸಮಾಜದಲ್ಲಿ ತಾನೇ ರಂಗಮ್ಮನನ್ನು ಏಕೆ ಸೆಕ್ರೆಟರಿ ಮಾಡಿದುದು ? ಅವಳು ಚೆನ್ನಾಗಿ ಮಾತನಾಡುತ್ತಾಳೆ ಎಂತಲ್ಲವೆ ? ಸರಿ. ನಾನು ಮಾತನಾಡುವುದನ್ನು ಕಲಿಯುತ್ತೇನೆ. ಅಲ್ಲಿಗೆ ನನ್ನ ಬತ್ತಳಿಕೆಯಲ್ಲಿ ಇನ್ನೊಂದು ಬಾಣ ಹೆಚ್ಚಿತು."

ತಾ|| ೨೬—೭....

"ಈ ದಿನ ಮಾತನಾಡುವುವಕ್ಕೆ ಆರಂಭಿಸಿದೆ. ಮೊದಮೊದಲು ನಾಚುಗೆಯಾಯಿತು ಏನು ಮಾತನಾಡಬೇಕು ಎಂಬ ವಿಚಾರ ಹೊಳೆಯಲಿಲ್ಲ. ಒಂದೆರಡು ನಿಮಿಷ ಮನಸ್ಸು ಒದ್ದಾಡಿತು. ನಾಲಗೆ ಹೊರಳಾಡಿತು. ಆದರೇನು ? ಇಷ್ಟವೊಂದು ಇತ್ತಲ್ಲ. ಅದೇ ಎಲ್ಲವನ್ನೂ ಮಾಡಿತು. ಈ ದಿನವೂ ನಾನು ಸಮಾಜಕ್ಕೆ ಹೋಗಿರಲಿಲ್ಲ. ಆದರೂ, ಸಮಾಜಕ್ಕೆ ಹೋಗಿದ್ದ ಹಾಗೆ, ಅಲ್ಲಿ ಏನೇನೋ ನಡೆದ ಹಾಗೆ ಸುಳ್ಳು ಸುಳ್ಳು ಸೇರಿಸಿ ಹೊಡೆದು ಬಿಟ್ಟೆ. ಪಾಪ ! ಅವರು ಎಷ್ಟು ಸರಳ ಹೃದಯರು. ನನ್ನ ಮಾತು ಈ ಕೊನೆಯಿಂದ ಆ ಕೊನೆಯವರೆಗೆ ಕೇಳಿದರು."

"ಅವರು ಈ ದಿನ ಎಚ್ಚರವಾಗಿರುವವರೆಗೂ ನಾನೂ ಎಚ್ಚರವಾಗಿದ್ದೆ. ಒಂದು ಕಟ್ಟು ವೀಳ್ಯದೆಲೆ, ಸುಮಾರು ಒಂದು ಸೇರು ಅಡಿಕೆ, ಹಾರಿ ಹೋಯಿತು. ಹೋದರೆ ಹೋಯಿತು. ನನ್ನ ದೇವರು ನನ್ನೊಡನೆ ಅಷ್ಟು ಮಾತನಾಡಿದರಲ್ಲ ! ಬಹುಶಃ ಅವರಿಗೂ ನನ್ನ ತಲೆ ಹರಟೆ ಬೇಕಾಗಿತ್ತು ಎಂದೇ ಕಾಣುತ್ತದೆ. ಇಲ್ಲದಿದ್ದರೆ ನಾನು ಕಾಣೆನೆ ? ಒಂದೇ ಮಾತಿನೊಳಗೆ ಎಲ್ಲ ಮುಗಿಸಿಬಿಡುತ್ತಿದ್ದರು. ಆಗಲಿ. ಎರಡನೆಯ ಬಲೆಯೊಂದು ಸಿಕ್ಕಿತು."

"ಇವೊತ್ತು ನನಗೆ ಬರೆಯಲು ಪುರಸತ್ತಿಲ್ಲ. ನಾಳೆಗೆ ತಿಂಡಿ ಏನು ಮಾಡಬೇಕು ? ಮಾತನಾಡುವುದಕ್ಕೆ ಏನು ವಿಷಯ ಹೊಂಚಿಕೊಳ್ಳಬೇಕು ?

ಇದೆಲ್ಲವನ್ನೂ ಸಿದ್ಧಮಾಡಿಕೊಳ್ಳಬೇಕು. ನಮ್ಮ ಕನ್ನಡದಲ್ಲಿ ಇಷ್ಟು ಮಾಸ ಪತ್ರಿಕೆಗಳು, ಇಷ್ಟು ಪತ್ರಿಕೆಗಳು ಬರುತ್ತವೆ. ಯಾರಾದರೂ ಒಬ್ಬರು, ಇಂಥ ತಿಂಗಳು ಇಂಥ ವಾರದಲ್ಲಿ, ಚಳಿ ದಿವಸದಲ್ಲಿ ಈ ತಿಂಡಿ, ಬೇಸಿಗೆ ದಿವಸದಲ್ಲಿ ಈ ತಿಂಡಿ ಎಂದು ಒಂದು ಪಟ್ಟಿ ಮಾಡಬಾರದೆ? ನಮಗೆ ಎಷ್ಟು ಅನುಕೂಲವಾದೀತು. ಹಾಗೇ ಗಂಡ ಹೆಂಡಿರಿಬ್ಬರೇ ಕುಳಿತುಕೊಂಡಾಗ ಏನೇನು ಮಾತನಾಡಿದರೆ ಚೆಂದ ಎಂಬುದೂ ಒಂದು ಪಟ್ಟಿಯಾದರೆ! ಸರಿ· ಎಷ್ಟು ಜನಕ್ಕೆ ಈ ವಿಷಯ ಗೊತ್ತಿದೆ! ಹೋಗದೇ ಇದ್ದ ಸಮಾಜದಲ್ಲಿ ನಡೆಯದೇ ಇದ್ದ ಸಂಗತಿಗಳನ್ನು ಹೇಳಿದ ನನ್ನ ಹಾಗೇ ಅವರೂ ಏನಾದರೂ ಕಗ್ಗ ಬರೆಯುತ್ತಾರೆ. ಯಾರಿಗೆ ತಾನೇ ಬೇಕು?"

"ಅಬ್ಬಾ! ಮನೆಯ ಕೆಲಸ ಎಷ್ಟು ಹೆಚ್ಚಾಗುತ್ತಿದೆ. ಈಗೇನು? ಅಗಸನಿಗೆ ಬಟ್ಟೆ ಹಾಕುವುದರಿಂದ ಹಿಡಿದು ಅಡುಗೆಯ ಮನೆಗೆ ಸಾಮಾನು ತೆಗೆದುಕೊಡುವವರೆಗೂ ಎಲ್ಲ ಕೆಲಸವೂ ನನ್ನದೇ ಆಗಿದೆ. ಅದಿರಲಿ ಮೊದಲು ಈ ಕೆಲಸ ಮಾಡಬೇಕು ಎಂದರೆ, 'ಅಯ್ಯೋ! ಯಾರು ಮಾಡಿಯಾರೋ? ಯಾರಿಗೆ ಬೇಕೋ' ಎನ್ನಿಸುತ್ತಿತ್ತು. ಈಗ, ನನ್ನ ಕೆಲಸ! ಇನ್ನಾರು ಯಾಕೆ ಮಾಡಬೇಕು ಎನ್ನಿಸುತ್ತದೆ. ಅಷ್ಟೇ ಏನು? ಅದು ಆಗುವವರೆಗೂ ನಿದ್ದೆ ಕೂಡ ಬರುವುದಿಲ್ಲ. ಅಬ್ಬಾ! ನನ್ನದು ಎಂದಕೂಡಲೇ ಅದೆಷ್ಟು ವ್ಯತ್ಯಾಸ! ಮೊದಲು, ಹದಿನೈದು ದಿನದ ಕೆಳಗೆ ಈ ಮನೆ ನನ್ನದಲ್ಲವೆ? ಇವರು ನನ್ನವರಲ್ಲವೆ? ಈ ಮಗು ನನ್ನದಲ್ಲವೆ? ಇಲ್ಲ. ನನ್ನದು ಎಂದು ಮನಸ್ಸು ಹೇಳಿಕೊಳ್ಳುತ್ತಿರಲಿಲ್ಲ. ಈಗ ಹೇಳಿಕೊಳ್ಳುವುದಿರಲಿ, ಗಂಟು ಹಾಕಿಕೊಂಡಿದೆ. ಆಗ ಅತ್ತ ಕಡೆ ಇತ್ತ ಕಡೆ ಹೋಗುವುದಕ್ಕೆ ಹೊತ್ತಿತ್ತು; ಮನಸ್ಸಿತ್ತು. ಈಗ ಎರಡೂ ಇಲ್ಲ."

"ಈ ದಿನ ಸಮಾಜಕ್ಕೆ ಹೋಗಿದ್ದೆ. ಬರುವ ವೇಳೆಗೆ–ಅಲ್ಲಿ ಬಹಳ ಹೊತ್ತು ಇರಲಿಲ್ಲ–ಕೆಂಪಿಯು ಮಗುವನ್ನು ಎತ್ತಿಕೊಂಡು ಆಡಿಸುತ್ತಿದ್ದಳು. ಮನೆಗೆ ಬಂದೆ, ಮಗುವು ನನ್ನನ್ನು ನೋಡಿ ಇಳಿಯಬಿತ್ತು. ಅವಳು ಏನೋ ಮಹಾಪರಾಧ ಮಾಡಿದ ಹಾಗೆ, ಮಗುವನ್ನು ಅತ್ತ ಕಡೆ

ಎತ್ತಿಕೊಂಡು ಹೋಗುವುದಕ್ಕೆ ಹೋದಳು. ನಾನು ಕರೆದು ಮಗುವನ್ನು
ಎತ್ತಿಕೊಂಡೆ. ಅವಳು ಪಾಪ! ಎಷ್ಟೋ ಶುಚಿಯಾಗಿದ್ದಾಳೆ. ಆದರೂ
ಮಗುವಿನ ಹತ್ತಿರ ಏನೋ ಚುಂಗು ಚುಂಗು ವಾಸನೆ. ನನಗೆ ಸಹಿಸಲಿಲ್ಲ. ಬೇರೆ
ಬಟ್ಟೆಯನ್ನು ಹಾಕಿದೆ. ಹಾಗೇ ಒಂದು ಯೋಚನೆ ಬಂತು. ನಾನು ಕೆಂಪಿಯ
ಕೂಡ ಸರಸವಾಡುತ್ತ ಕುಳಿತುಕೊಳ್ಳುವೆನೆ? ಇಲ್ಲ. ನನ್ನ ಅಂತಸ್ತಿಗೆ
ಅದು ಬಹಳ ಹೀನಾಯ! ಹಾಗಾದರೆ ನಮ್ಮ ಪುಟ್ಟು ಯಾಕೆ ಆಡಬೇಕು?
ನಮ್ಮ ಪುಟ್ಟು ನನ್ನ ಹೊಟ್ಟೆಯಲ್ಲಿ ಹುಟ್ಟಿದವಳು. ನನ್ನ ರಕ್ತ, ಮಾಂಸ,
ಆಶೆ, ಪ್ರೇಮಗಳ ಬೊಂಬೆ, ನಮ್ಮ ಎಲ್ಲ ಆಸ್ತಿಗಿಂತಲೂ ಹೆಚ್ಚಿನ ಮಗು.
ಅದು ಏಕೆ ಆ ಕೆಂಪಿಯ ಜೊತೆಯಲ್ಲಿ ಆಡಬೇಕು?"

"ಪುಟ್ಟೂಗೂ ನನ್ನ ಜೊತೆಯಲ್ಲಿ ಆಡುವುದರಲ್ಲಿ ಇರುವ ಇಷ್ಟ
ಕೆಂಪಿಯ ಜೊತೆಯಲ್ಲಿ ಆಡುವುದರಲ್ಲಿ ಇಲ್ಲ. ಇದು ಇದುವರೆಗೆ ತೋರಿರ
ಲಿಲ್ಲ. ಈಗ ತೋರಿದೆ. ಇದೆಲ್ಲಿಯ ನ್ಯಾಯ? ಹೋಗಿ ಅಲ್ಲಿ ಇಲ್ಲಿಯ ಮಾತು
ಆಡಿಕೊಂಡು ಸಮಾಜಗಿಮಾಜದಲ್ಲಿ ಕುಳಿತಿರುವುದಕ್ಕಿಂತ, ಇಲ್ಲಿ ಕುಳಿತು
ಕೊಂಡು ಪುಟ್ಟೂ ಜೊತೆಯಲ್ಲಿ ಆಟವಾಡುವುದೇ ಉತ್ತಮ ಎನ್ನಿಸುತ್ತದೆ.
ಆದರೆ ಇವೊತ್ತೇ ಈ ವಿಷಯ ಇತ್ಯರ್ಥ ಮಾಡುವುದಿಲ್ಲ. ಇನ್ನೂ ಮೂರು
ದಿನ ನೋಡುತ್ತೇನೆ."

"ಈ ಮೂರು ದಿನದಿಂದ ನನ್ನ ಕಂತೆ ಪುರಾಣ ನಡೆಯುತ್ತಿದೆ.
ಇವೊತ್ತು ನನ್ನ ಪುರಾಣಕ್ಕೆ ಒಳ್ಳೇ ಮಂಗಳಾರತಿ ಆಯಿತು. "ಏನು!
ನೀವೊಳ್ಳೇ ದೊಡ್ಡ ಲೆಕ್ಚರರ್ ಆಗಿದ್ದೀರಲ್ಲ." ಎಂದು ಮೆಚ್ಚಿಕೊಂಡು,
ನನಗೆ ಪ್ರೇಮದ ಕಾಣಿಕೆಯೊಂದು ಸಲ್ಲಿಸಿದರು. ನನಗೆ ಇವೊತ್ತು ಪರಮಾ
ನಂದ. ಮೂರು ದಿನದಿಂದ ನನ್ನ ದೇವರಿಗೆ ನಾವೆಲ್ಲಿನ ಮೇಲೆ ಮನಸ್ಸು
ಹೋಗಿಲ್ಲ. ನನಗಂತೂ ಒಂದು ಸ್ವರ್ಗವಾಗಿದೆ. ಅವರು ಹಗಲು ಸಿಕ್ಕುವು
ದಿಲ್ಲ, ರಾತ್ರಿ ದಕ್ಕುವುದಿಲ್ಲ ಎನ್ನುವಹಾಗಿತ್ತು. ಈಗ ಹಾಗಿಲ್ಲ. ಹಗಲು
ಸಿಕ್ಕದೆ ಓಡುವ ಸ್ವಾಮಿಯನ್ನು ರಾತ್ರಿಯ ಹೊತ್ತು ಹಿಡಿದು ಹಾಕಿಬಿಡು
ತ್ತೇನೆ. ಅಬ್ಬಾ! ಈ ಮೂರು ನಾಲ್ಕು ದಿನಕ್ಕೇ ನಾನೆಷ್ಟು ಗಂಡುಬೀರಿ
ಯಾಗಿ ಹೋಗಿದ್ದೇನೆ! ನಾಚಿಗೆ ಗೀಚಿಗೆ ಎಲ್ಲಿ ಓಡಿಬಿಟ್ಟಿತೋ ಏನೋ?"

" ಈ ದಿನ ಅಂತೂ ಅವರು ಬಂದಾರೆ ಎಂದು ಬಾಗಿಲಲ್ಲೇ ಕಾದಿದ್ದೆ. ಥೂ! ಅದೇನು ಮನಸ್ಸೋ? ಇನ್ನೂ ಏಳೂವರೆ ಕೂಡ ಆಗಿರಲಿಲ್ಲ. ಆದರೂ ಅವರು ಬರುವ ವೇಳೆಗೆ ಎಲ್ಲ ಅಡಿಗೆಯಾಗಿರುವುದಿಲ್ಲವೋ ಎಂದು ದಿಗಿಲು. ಅಡುಗೆಯವನಿಗೆ ಇವೊತ್ತು ಗಾಳಿ ಬಡಿಸಿಬಿಟ್ಟೆ. ಅವನು ಈ ದಿನ 'ಅಮ್ಮಾ ಅವರಿಗೆ ಏನೋ ಮೆಟ್ಟಿಕೊಂಡಿದೆ' ಎಂದುಕೊಂಡಿರಬೇಕು. ಹೌದೋ ಅಲ್ಲವೋ ಮತ್ತೆ? ನಿತ್ಯನಿತ್ಯವೂ ಏಳೂವರೆ ಗಂಟೆ ವೇಳೆಗೆ ರ್‍ಯಾಕೆಟ್ ಹಿಡಿದು ಕೊಂಡು ಮನೆಗೆ ಬಂದು, ಆಚಾರ್‍ರು ಮಾಡಿ ಹಾಕಿದ ಅಡುಗೆ ತಿಂದು ಕೊಂಡು ಇರುತ್ತಿದ್ದವಳು, ಈಗ 'ಇಂಥ ಅಡುಗೆ ಮಾಡಿ, ಇಷ್ಟು ಹೊತ್ತಿಗೇ ಮಾಡಿ, ಏಕೆ ಹೊತ್ತಿಗೆ ಸರಿಯಾಗಿ ಅಡುಗೆಯಾಗಲಿಲ್ಲ?' ಎಂದು ರಂಪ ಮಾಡಿದರೆ ಅವನಿಗೆ ಹಾಗೆ ಎನ್ನಿಸಿದರೆ ಆಶ್ಚರ್ಯವೇ?"

" ಯಾರು ಏನು ಬೇಕಾದರೂ ಎಂದುಕೊಳ್ಳಲಿ, ಈಗ ನನಗೆ ಬೇಕಾಗಿರುವುದು ಎರಡು ವಸ್ತುಗಳು. ನನ್ನ ಸ್ವಾಮಿ, ನನ್ನ ಪುಟ್ಟು, ಅವರಿಬ್ಬರ ಯೋಗಕ್ಷೇಮ ನನಗೆ ಬೇಕಾಗಿರುವುದು. ಈ ಮನೆಯಲ್ಲಿ ಇರುವ ಸಮಸ್ತವೂ ಅದಷ್ಟಕ್ಕೇ ನನಗೆ ಬೇಕಾಗಿರುವುದು. ನನಗೆ ಈ ಜನ್ಮವಿರುವ ವರೆಗೂ ಅವರಿಬ್ಬರ ಕೂದಲೆಳೆ ಕೂಡ ನೋಯದ ಹಾಗೆ ಇರುವುದಕ್ಕೆ ಆಗಿ ಬಿಟ್ಟರೆ ಸಾಕು."

" ಈ ದಿನ ಅಡುಗೆಯ ಮನೆಯಲ್ಲಿ ಏನೋ ಗಡಿಬಿಡಿ ಆದಹಾಗೆ ತೋರುತ್ತದೆ. ಒಗ್ಗರಣೆ ಸಾಸುವೆ ಸೀದು ಹೋಗಿತ್ತು. ಸಾರು ಚೆನ್ನಾಗಿದ್ದರೂ ಸೀದ ಸಾಸುವೆ ಏಕೋ ನನಗೆ ಕೊಂಚ ಅಸಮಾಧಾನ. ಅವರಿಗಿರಿಗೆ ಮಾತನಾಡಲಿಲ್ಲ. ಊಟ ಆದಮೇಲೆ ಮಾತನಾಡಬೇಕೆಂದು ಇದ್ದೆ. ಆದರೆ, ಅವರಿಗೆ ಅಡಕೆಲೆ ಕೊಡುವ ಅವಸರದಲ್ಲಿ ಮರೆತುಹೋಯಿತು. ಇರಲಿ."

ತಾ॥ ೧–೮....

" ನಿನ್ನೆ ನನಗೆ ಡೈರಿ ಬರೆಯುವುದಕ್ಕೂ ಹೊತ್ತಿರಲಿಲ್ಲ. ತಿಂಗಳ ಲೆಕ್ಕ ಎಲ್ಲ ಮಾಡಿ ಅವರಿಗೆ ತೋರಿಸಿದೆ. ಅವರದೆಷ್ಟು ಒಳ್ಳೆಯವರು! ನನ್ನನ್ನು

ಹಾಗೇ ತಬ್ಬಿಕೊಂಡು, 'ನೋಡಿದಿಯಾ? ಅಧಿಕಾರ ಬೇಕು ಅಧಿಕಾರ ಬೇಕು' ಎಂದೆಯಲ್ಲ ಎಷ್ಟು ಕಷ್ಟ! ನನ್ನ ಪುಟ್ಟ ತೊಂಬೆ, ಆಟ ಆಡಿ ಕೊಂಡು ಹಕ್ಕಿಯ ಹಾಗೆ ಇರೋದು ಬಿಟ್ಟು "ರಾವಣನ ಮೋಹದ ಮಡದಿಯಲ್ಲ. ಲಂಕಾ ಸಾಮ್ರಾಜ್ಯದ ಚಕ್ರವರ್ತಿನಿ" ಎಂದ ಮಂಡೋ ದರಿಯ ಹಾಗೆ ಆಗಿಬಿಟ್ಟೆ. ಅಯ್ಯೋ! ಎಷ್ಟುಕಷ್ಟ ಪಟ್ಟೆ! ನನಗೆ ಹೇಳಬಾರ ದಾಗಿತ್ತೆ? ನಾನು ಹತ್ತು ನಿಮಿಷದಲ್ಲಿ ಮಾಡಿ ಕೊಡುತ್ತಿದ್ದೆ" ಎಂದು ಹೇಳಿ ಒಂದು ಮುತ್ತು ಕೊಟ್ಟರು. ಕಷ್ಟವಂತೆ! ಭಾರವಂತೆ! ಅವರು ಹಾಗೆ ತಬ್ಬಿಕೊಂಡಾಗ ಕಷ್ಟ ಕಳೆದು ಹೋಯಿತು. ಮುತ್ತು ಕೊಟ್ಟಾಗ ಭಾರ ಇಳಿದು ಹೋಯಿತು ಎಂಬುದು ಅವರಿಗೇನು ಗೊತ್ತು?

ಮೊನ್ನೆಯಿಂದ ಸಾಸುವೆ ಸೀಯಿಸಿದ ವಿಚಾರವೇ ಮನಸ್ಸಿನಲ್ಲಿ ಹೊಗೆ ಯಾಡುತ್ತಿದೆ. ಇವೊತ್ತು ಸಂಬಳ ಕೊಡುವಾಗಲೇ "ಬೇಡಿ. ಹೊರಟು ಹೋಗಿ" ಎಂದು ಬಿಡಬೇಕು ಎನ್ನಿಸಿತು. ಆದರೂ ಇರಲಿ. ಇವೊತ್ತು ಮಾಡುವ ಕೆಲಸ ಇನ್ನೊಂದು ದಿನ ಮಾಡೋಣ ಎಂದು ತಡೆದಿದ್ದೇನೆ. ಆಯಿತು! ಆಚಾರಿಯೂ ಪಾಪ! ಬಡವ! ಅವನಿಗೂ ಹೆಂಡಿತಿ ಮಕ್ಕಳಿ ದ್ದಾರೆ! ಅವರ ಗತಿಯೇನು ಎಂಬುದನ್ನೂ ನಾನು ಗಮನಿಸಬೇಕು. ಅವನು ಮಾಡುವುದು ಮಾತ್ರ ಸರಿಯೆ? ನನ್ನ ದೇವರಿಗೆ, ನನ್ನ ಸ್ವಾಮಿಗೆ, ನನ್ನ ಹೃದಯೇಶ್ವರನಿಗೆ, ಕಾಟಾಚಾರದ ಅಡುಗೆ ಮಾಡಿ ಹಾಕಿದರೆ ನನಗೆ ಕೋಪ ಬರುವುದಿಲ್ಲವೋ? ಪಾಪ! ಬೆಳಗಿಂದ ಸಂಜೆಯವರೆಗೂ ಗಾಣದೆತ್ತಿಗಿಂತ ಹೆಚ್ಚಾಗಿ ದುಡಿದು ಬಂದವರಿಗೆ ಮನೆಗೆ ಬಂದರೆ ಅಂಬಲಿಯೋ ತುಂಬೆ ಸೊಪ್ಪೋ ವಿಶ್ವಾಸದಿಂದ, ಆಶೆಯಿಂದ, ಬಡಿಸಬೇಡವೋ? ಅವನನ್ನು ಏಕೆ ಇಟ್ಟಿರುವುದು? ಅವನು ಕಂಡೂ ಕಾಣದೆ ತಿಂದು ಕೊಬ್ಬಿ ಕೊಬ್ಬಿ ಕರೋಟಿ ಕೋಣನಾಗಲೆಂದೋ? ಅಥವಾ ತಾನು ಮಾಡುವ ಕೆಲಸ ಮಾಡಿ, ನನಗೆ ಸಹಾಯಕನಾಗಿರಲಿ ಎಂದೋ? ಇವೊತ್ತು ಸೂಕ್ಷ್ಮವಾಗಿ ಅಂದಿದ್ದೇನೆ. 'ನಾಳೆ ಅಡುಗೆ ಸರಿಯಾಗಿರಬೇಕು' ಎಂದು ಹೇಳಿ ಅಲ್ಲಿ ನಿಲ್ಲದೆ ಹೊರಟು ಬಂದು ಬಿಟ್ಟೆ, ನಾಳೆಗೆ ನೋಡೋಣ. ಸರಿ ಹೋದರೆ ಸರಿ. ಈಗಲಿಂದ ಇಲ್ಲ ದ್ದೆಲ್ಲ ಏಕೆ ಯೋಚಿಸಲಿ?"

ತಾ॥ ೨-೮....

"ಇವೊತ್ತು ಸಣ್ಣದೊಂದು ನಾಟಕ ನಡೆದಿದೆ. ನಾನು ಅಸಮಾಧಾನ ಪಟ್ಟುದು ಅಡುಗೆಯ ಆಚಾರ್ರಿಗೆ ಅವಮಾನವಾಯಿತಂತೆ! ಹಾಗಂತೆ ಹೀಗಂತೆ! ಹದಿನೈದು ದಿನದ ಹಿಂದೆ ಇವನು ಹೀಗೆ ಅಸಮಾಧಾನ ಪಟ್ಟಿದ್ದರೆ ನಾನು ಹೆದರಿ ಸೀರಾಗುತ್ತಿದ್ದೆ! ಈಗ ಏನೋ ಆಗಿಹೋಗಿದೆ. ಇವನು ರೇಗಿದರೆ ಏನು ಮಾಡುತ್ತಾನೆ? ಬರುವುದಿಲ್ಲ. ಹೊರಟುಹೋಗುತ್ತಾನೆ. ಹೋಗಲಿ. ಮೊದಲು ಸಲ ಅಡುಗೆ ಕೆಡುತ್ತದೆ, ಕೆಡಲಿ. ಮಾಡಿದ್ದೆಲ್ಲ ಅತ್ತ ಕಡೆ ಸುರಿದು ಬೇರೆ ಮಾಡುತ್ತೇನೆ. ಅದೂ ಕೆಟ್ಟು ಹೋದರೆ, ಅವರಿಗೇ ಹೇಳುತ್ತೇನೆ. 'ಇವೊತ್ತು ನಾಳೆ ದೊಡ್ಡ ಮನಸ್ಸು ಮಾಡಿ, ಈ ಕೆಟ್ಟ ಅಡುಗೆಯೇ ಊಟ ಮಾಡಿ, ಎರಡು ಮೂರು ದಿನಗಳೊಳಗಾಗಿ ಕಲಿತುಕೊಂಡು ಬಿಡುತ್ತೇನೆ' ಎಂದು ಹೇಳುತ್ತೇನೆ. ಅವರನ್ನು ಒಪ್ಪಿಸುವ ರೀತಿಯೇ ಒಂದಿದೆ. ಅದು ಕಂಡುಹಿಡಿದಿದ್ದೇನೆ. ಆ ಗುಟ್ಟು ತಿಳಿದಿರುವಾಗ ಇನ್ನೇಕೆ ಈ ಪಾಡು?"

"ಇವೊತ್ತು ಏಕೋ ಬೇಡ ಬೇಡವೆಂದರೂ ಇದೇ ಯೋಚನೆ. ನನ್ನೊಡೆಯನಿಗೆ ನಾನೇ ಅಡುಗೆ ಮಾಡಿಡದೆ ಈ ಕೂಲಿಯು ಅನ್ನ ಏಕೆ ಹಾಕಬೇಕು? ಎನ್ನಿಸುತ್ತಿದೆ. ಸಮಾಜದಲ್ಲಿ ಎಲ್ಲರೂ "ಅಡುಗೆಯವನನ್ನು ಓಡಿಸಿಬಿಟ್ಟು ತಾನೇ ಅಡುಗೆ ಮಾಡುತ್ತಿದ್ದಾಳೆಯಂತೆ ಎಂತಹ ಲೋಭಿ!'ಯೆಂದು ಹಾಸ್ಯ ಮಾಡುತ್ತಾರೆ. ಅವರು ಮಾಡಲಿ, ನೋಡೋಣ! ಗ್ರಹಚಾರ ಬಿಡಿಸಿಬಿಡುತ್ತೇನೆ. ಅದರ ಮೇಲೆ ಒಂದು ಲೆಕ್ಚರ್ ಮಾಡಿಬಿಡುತ್ತೇನೆ. "ನನ್ನ ಸರ್ವಸ್ವದಿಂದಲೂ ಆರಾಧಿಸಬೇಕಾದ ಸ್ವಾಮಿಗೆ, ಯಾವನೋ ಅಡುಗೆ ಮಾಡಿ ಹಾಕುವುದೆ? ಅವನು ಬಂದು ಕೆಲಸ ಮಾಡುವುದು ಕಾಸಿಗೆ. ಅವನು ನಮ್ಮ ಹಾಗೆ 'ಅಯ್ಯೋ ಪಾಪ!' ಎಂದು ಒಂದು ಸಲವಾದರೂ ಹೇಳುವುದಾದರೂ ಉಂಟೆ? ಈ ದಿನ ಅವರು ಒಂದು ತುತ್ತು ಕಡಿಮೆ ಊಟ ಮಾಡಿದರೆ ನನಗೆ ಹೊಟ್ಟೆ ಚುರ್ ಎನ್ನುತ್ತದೆ: ಅವನಿಗೆ ಎಷ್ಟೋ ಸಂತೋಷ! ರಾಯರಿಗೆ ಹಗಲೂಟ ಕಡಿಮೆಯಾದರೆ ಉಪ್ಪಿಟ್ಟೋ

ತಿಂಡಿಯೋ ಹೆಚ್ಚು ಮಾಡಿ ಮನೆಗೂ ಅಷ್ಟು ಕಟ್ಟಿಕೊಂಡು ಹೋಗ ಬಹುದು ಎಂತ! ಕಣ್ಣಿಟ್ಟು ನೋಡಿದರೆ ಇದೆಂತಹ ಅನರ್ಥ ಎನ್ನುವುದು ನಿಮಗೆ ತಿಳಿದೀತು" ಎಂದು ಬಾಯಿ ಕಟ್ಟಿಸಿಬಿಡುತ್ತೇನೆ. ಆಗಲಿ ದುಡುಕ ಬಾರದು. ನನ್ನ ಗಂಡ, ನನ್ನ ಮಕ್ಕಳು ಎಂದು ಆದಮೇಲೆ, ನಾನೇ ಏಕೆ ವಿಶ್ವಾಸವಾಗಿ ಅಡುಗೆ ಮಾಡಿ ಆದರವಾಗಿ ಬಡಿಸಬಾರದು?"

"ಇವೊತ್ತು ಇನ್ನೊಂದು ಅನರ್ಥವಾಗಿಹೋಯಿತು. ಏನೋ ಕೆಲಸ ದಲ್ಲಿದ್ದುಬಿಟ್ಟೆ. ಅಷ್ಟರೊಳಗೆ, ಎರಡನೆಯ ತಾರೀಖು, ಸಮಾಜದ ಮೀಟಿಂಗು, ನೆನಪಾಗಿ ಅಲ್ಲಿಗೆ ಓಡಿ ಹೊರಟುಹೋದೆ. ಬಂದವಳೇ ಇನ್ನೇನೋ ಕೆಲಸ ಗಿಲಸ ಎಂದು ಇದ್ದುಬಿಟ್ಟೆ, ವೀಳ್ಯದೆಲೆ ತರಿಸಲಿಲ್ಲ. ಊಟವಾಗಿ ಅವರಿಗೆ ತಾಂಬೂಲ ಕೊಡುವ ವೇಳೆಯವರೆಗೂ ಅದರ ನೆನೆಪೇ ಆಗಲಿಲ್ಲ. ಹಾಳು! ಎಂತಹ ಮಾನ ಹೋಗುವ ಸಂದರ್ಭ! ದೊಡ್ಡದಾಗಿ ಅಧಿಕಾರ ವಹಿಸಿ ಕೊಂಡು ಇನ್ನೂ ಹದಿನೈದು ದಿನವಾಗಿಲ್ಲ. ಆಗಲೇ ಅಡಕೆಲೆಗೆ ಸೊನ್ನೆ ಎಂದುಬಿಟ್ಟರೆ, ನಾನು ಯಾವ ಮುಖ ಹೊತ್ತು ಬದುಕಬೇಕು? ಆಗಲೇ ಯಾರನ್ನಾದರೂ ಕಳಿಸಿ ತರಿಸೋಣವೆಂದರೆ, ಮಳೆ ಬೇರೆ."

"ಆದರೆ, ನನ್ನ ಸ್ವಾಮಿ ದೇವರಂಥವರು. "ಏನು ಪುಣ್ಯಾತ್ಮಗಿತ್ತಿ! ಚಳಿ ಹೊತ್ತು ಬರಿಯ ಬಾಯಿ ಮಾಡಿ ಬಿಟ್ಟೆಯೋ?" ಎಂದರು. ನಾನು ನಾಚಿಕ್ಕೆ ಮುಖ ಹಾಕಿಕೊಂಡು ನಿಂತುಕೊಂಡೆ. ಅವರು ಬಂದು, ಒಂದಿಷ್ಟು ಚೇಷ್ಟೆ ಮಾಡಿ, ಗಂಡುಸರಿಗೆ ಏಕೆ ಇಷ್ಟು ಚೇಟೆ! ಇರಲಿ, ಇರಲಿ, ಆ ಚೇಷ್ಟೆಯೇ ಇಲ್ಲದಿದ್ದರೆ ನನಗೆ ಏಕೋ ಏನೋ ಎಲ್ಲ ಬಿಡುಬಿಡುವಾದ ಹಾಗೆ ತೋರುತ್ತದೆ. "ಅಯ್ಯೋ ಮಂಕು ದಿಣ್ಣೆ! ಇಲ್ಲಿ ನೋಡು, ಅಡಕೆಲೆ ಆಗದಿದ್ದರೂ ಕೆಂಪಾಗಿರುವ ಇದಿರುವಾಗ, ಅದೇಕೆ?" ಎಂದು ಕಚ್ಚಿಬಿಟ್ಟರು. ಕೊಂಚ ನೋವಾಯಿತು. ಆದರೂ. . . . ಇನ್ನು ಮೇಲೆ ವೀಳ್ಯದೆಲೆ ತರಿಸು ವುದೇ ಬಿಟ್ಟುಬಿಡಲೇ? ಬೇಡ, ಬೇಡ. ಅದನ್ನು ತರಿಸದಿದ್ದರೆ, ಅವರ ಹತ್ತಿರ ಅಷ್ಟು ಹೊತ್ತು ಕುಳಿತುಕೊಂಡು ಹೊತ್ತು ಕಳೆಯುವುದಕ್ಕೆ ಇನ್ನು ಯಾವ ಉಪಾಯವೂ ಇಲ್ಲ."

" ಸಮಾಜದ ವಿಚಾರ ಬರೆಯಬೇಕು. ಇನ್ನೊಂದು ದಿನ ಬರೆದ ರಾಯಿತು. ಏಕೋ ಏನೋ ಈಚೆಗೆ ನನಗೆ ಸಮಾಜ ಅಷ್ಟು ಬೇಕಿಲ್ಲ. ಇವೊತ್ತು ರಂಗಮ್ಮಾ ಹಾಸ್ಯ ಮಾಡಿದರು. ನಾನೇನು ಮಾಡಲಿ ? ಸಕ್ಕರೆಗಿಂತ ಕಬ್ಬು ರುಚಿಯೇ ಇರಬಹುದು. ಆದರೂ ಸಕ್ಕರೆಯಂತಹ ಸಂಸಾರ ಇರುವಾಗ ಕಬ್ಬಿನಂತಹ ಸಮಾಜ ಯಾರಿಗೆ ಬೇಕು ? "

ತಾ|| ೩—೮. . . .

" ಈ ದಿನ ಬೆಳಿಗ್ಗೆ ಒಂದು ವಿನೋದ ಮಾಡಿಬಿಟ್ಟೆ. ಅಡುಗೆಯವನನ್ನು ಕರೆದು " ಆಚಾರ್ರ್ರೆ ! ನಿಮಗೆ ಕೆಲಸ ಹೆಚ್ಚಾಗುತ್ತಿದೆ ಅಲ್ಲವೇನ್ರಿ? ನಿಮಗೊಂದು ಅಸಿಸ್ಟೆಂಟ್ ಕೊಟ್ಟರೆ ಹೇಗರಿ ? " ಎಂದೆ. ಅವನೋ ಶುದ್ಧ ಪೆಚ್ಚು ! ಈ ಕಿವಿಯಿಂದ ಆ ಕಿವಿಯವರೆಗೆ ಬಾಯಿ ಕಿಸಿದುಕೊಂಡು, " ಅಮ್ಮಾ ! ನೀವು ತಿಳಿದವರು. ನಾನೇನು ಹೇಳಲಿ ? ನೋಡರಿ " ಎಂದು ಅರ್ಥವಿಲ್ಲದ ಅಸಂಬದ್ಧ ಪ್ರಲಾಪ ಏನೇನೋ ಹೇಳಿದ. ನಾನು ಕಾರ್ಯವಾಸಿ. ಕತ್ತೆಯ ಕಾಲೂ ಕಟ್ಟಬೇಕಲ್ಲ, ನಾನೂ ಕೇಳಿದೆ. ಏನೋ ಆ ಪ್ರಾರಬ್ಧವೆಲ್ಲ ನಾನು ಬರೆಯುವುದಿಲ್ಲ.'

" ಈ ದಿನ ಅನ್ನ ಮಾಡುವುದನ್ನು ಕಲಿತೆ. ಅನ್ನ ಉದುರುದುರಾಗಿ ಚೆನ್ನಾಗಿ ಆಗಿತ್ತು. ನಾನು ಬಡಿಸಿದಾಗ, 'ಅಬ್ಬಾ ! ಅವರ ಬುದ್ಧಿ ಅದೆಷ್ಟು ಸೂಕ್ಷ್ಮ ! ಕೂಡಲೇ ಹೇಳಿಬಿಟ್ಟರು, ಇವೊತ್ತು ಇನ್ನು ಯಾರದೋ ಕೈವಾಡ ಇದು ! ಬಹುಶಃ ನೀನು ಮಾಡಿದೆಯೇನೋ ?' ಎಂದುಬಿಟ್ಟರು. ಸದ್ಯಕ್ಕೆ ಅನ್ನ ಚೆನ್ನಾಗಿ ಆಗಿತ್ತು. ನಮ್ಮ ಸ್ಕೂಲಿನಲ್ಲಿ ಏನೇನೋ ಹೇಳಿ ಕೊಟ್ಟರು. ಅದೆಲ್ಲದರ ಬದಲು ನಮಗೆ ಅಡುಗೆ ಹೇಳಿಕೊಟ್ಟಿದ್ದರೆ? ಇಂಗ್ಲೆಂಡಿನಲ್ಲಿ ಯಾವ ದೊರೆ ಆಳಿದರೇನು ? ಮತ್ತೊಂದು ಕಡೆ ಇನ್ನೊಬ್ಬರು ಆಳಿದರೇನು ? ಇದೆಲ್ಲ ನಮಗೇಕೆ? ನಾವು ಮನೆಯನ್ನು ಆಳುವುದಕ್ಕೆ ಹುಟ್ಟಿರುವವರು. ಆಳುವುದಕ್ಕೆ ಬರದೆ ಅಳುತ್ತಿದ್ದೇವೆ. ನಿಜವಾಗಿಯೂ ಔರಂಗಜೇಬನು ಗುರುಗಳಿಗೆ ಹೇಳಿದ ಮಾತೆಲ್ಲ ನೆನಪಾಯಿತು. ಸ್ಕೂಲಿನಲ್ಲಿ

ಓದಿದ್ದು ಏನೇನೂ ಸಹಾಯವಾಗಿಲ್ಲ. ಅದೆಲ್ಲ ವೆಂಕ ಪಣಂಬೂರಿಗೆ ಹೋಗಿ ಬಂದಂತೇ ಆಯ್ತು."

"ಇವೊತ್ತು ಪುಟ್ಟು ಜೊತೇಲಿ ಆಟವಾಡಬೇಕು ಎನ್ನಿಸಿತು ಕೂತು ಅಷ್ಟು ಹೊತ್ತು ಪುರುಸತ್ತಾಗಿ ಆಟವಾಡಿದೆ. ಅಯ್ಯೋ! ಮಗು ಎಷ್ಟು ಚೆನ್ನಾಗಿ ಆಟವಾಡಿತು! ಆಗಲೇ ಅವಳಿಗೆ ವರ್ಷವಾಗುತ್ತಿದೆ. "ಆಡು ಪಾಂಬೆ!" ಯಂತೂ ನಿಜವಾಗಿಯೂ ಚೆನ್ನಾಗಿತ್ತು. ಇವಳನ್ನ ಹಾಗೇ ಆಟವಾಡಿಸುತ್ತ ಚೆನ್ನಾಗಿ ನೃತ್ಯ ಕಲಿಸಿಬಿಡಬೇಕು. ನನಗೆ ಎಷ್ಟೋ ದಿವಸ 'ನೃತ್ಯ ಕಲಿತಿದ್ದರೇ–' ಎನ್ನಿಸುತ್ತದೆ. ನಿಜ: ನಾವು ಹೋಗಿ ಎಲ್ಲೂ ಕುಣಿಯಬೇಕಾಗಿಲ್ಲ. ಆದರೆ, ಅದರಲ್ಲಿ ಒಂದು ಸಂತೋಷ ಇಲ್ಲವೆ? ಹೋಗಿ ರ್‍ಯಾಕೆಟ್ ಹಿಡಿದು ಟೆನ್ನಿಸ್ ಕುಟ್ಟಿ ಭೇಷ್ ಎನ್ನಿಸಿಕೊಳ್ಳು ವುದಕ್ಕಿಂತ ನನ್ನ ಪಾಡಿಗೆ ನಾನು ಒಂದು ಗಳಿಗೆ ಡ್ಯಾನ್ಸ್ ಮಾಡಿಕೊಂಡರೆ ಎಷ್ಟೋ ಹಿತ ಅಲ್ಲವೆ? ಈಗ ತಾನೇ ಏನು ಮಹಾ! ನನಗೆ ಇಲ್ಲ ಎಂತ ಅಳುವುದಕ್ಕಿಂತ ನನ್ನ ಮಕ್ಕಳಿಗೆ ಕಲಿಸಿದರಾಯಿತು. ಇರಲಿ."

"ಈ ದಿನ ರಂಗಮ್ಮನೇ ಬಂದು ಸಮಾಜಕ್ಕೆ ಕರೆದುಕೊಂಡು ಹೋದರು. ಅಯ್ಯೋ! ಏನನ್ಯಾಯ! ರ್‍ಯಾಕೆಟ್ ತೆಗೆದುಕೊಂಡು ಟೆನ್ನಿಸ್‌ಗೆ ಇಳಿದೆ. ನಾನೂ ಕೊಂಚ ಚೆನ್ನಾಗಿ ಆಡುತ್ತೇನೆಯೆಂದು ಎಲ್ಲರೂ ಒಪ್ಪಿಕೊಂಡಿದ್ದಾರೆ. ನಾನೂ ಲೋಕಲ್ ಮ್ಯಾಚ್‌ಗಳಲ್ಲಿ ಲೋಸೆಟ್ ಕೂಡ ಹೊಡೆದಿದ್ದೇನೆ. ಆದರೇನು? ಇವೊತ್ತೇನೋ ಅನರ್ಥವಾಗಿ ಹೋಗಿದೆ. ಬಾಲ್ ರಿಸೀವ್ ಮಾಡುವುದಕ್ಕೆಂದು ನಿಂತು, ಬರುವ ಬಾಲ್ ನೋಡುತ್ತಿದ್ದರೆ, ಮನಸ್ಸು ಪುಟ್ಟೂ ಮುಖ ನೋಡುವುದಕ್ಕೆ ಓಡಿ ಹೋಗುತ್ತಿದೆ ಯಲ್ಲ! ಡ್ರೈವ್ ಮಾಡುತ್ತೇನೆ ಎಂದು ರ್‍ಯಾಕೆಟ್ ಹೊಡೆಯುವುದಕ್ಕೆ ಕೈಯೆತ್ತಿರುವಾಗ ಅವರ ನೆನೆಪಾಗಿ, ಎಲೆಗೆ ಸುಣ್ಣ ಹಚ್ಚುವ ನೆನೆಪಾಗುವುದಲ್ಲ! ಪ್ಲೇಸ್ ಮಾಡಬೇಕು ಎಂದು ಮುಂದೆ ಓಡುತ್ತಿದ್ದರೆ ಯಾರೋ ಸೆರಗು ಹಿಡಿದು ಎಳೆದು ಕಿಲಕಿಲ ಎಂದು ನಕ್ಕಂತಾಗುವುದಲ್ಲ! ಇವೊತ್ತು ಎಲ್ಲರೂ ನನ್ನನ್ನು ಹಾಸ್ಯ ಮಾಡಿದರು. ಅವರು ನನ್ನನ್ನು ನೋಡಿ ನಕ್ಕಿದ್ದೆಲ್ಲ

ನನಗೇನೋ ಕಾಂಪ್ಲಿಮೆಂಟ್ಸ್ ಎನ್ನಿಸಿತು. ಉಹು! ನಾನು ಅದೆಲ್ಲ ಬರೆಯುವುದಿಲ್ಲ. ಅಬ್ಬಾ! ಹೆಂಗುಸರು ಎನ್ನುತ್ತಾರೆ, ಹಾಗೆನ್ನುವವರು ನಾವು ಇನ್ನು ಯಾರೂ ಕೇಳುವವರಿಲ್ಲ ಎಂದು ನಂಬಿಕೆಯಾಗಿರುವಾಗ ಆಡಿಕೊಳ್ಳುವ ಮಾತುಗಳನ್ನೂ ಕೇಳಬೇಕು."

"ಟೆನ್ನಿಸ್ ಕೋರ್ಟಿನಲ್ಲಿ ಆದ ಅನುಭವ ಅವರಿಗೆ ಹೇಳಬೇಕು ಎನ್ನಿಸಿತು. ಆದರೆ ಹೇಳಲಿಲ್ಲ. ಇವೊತ್ತು ಅವರ ಬಳಿ ಕುಳಿತು ಪುಟ್ಟೂ ಆಟ, ಅವಳಿಗೆ ಡ್ಯಾನ್ಸ್ ಕಲಿಸಿದರೆ ಎಷ್ಟು ಚೆನ್ನ! ಈ ವಿಚಾರ ಹೇಳಿದೆ. ಅವರೂ 'ಏನು ಈ ಕಳ್ಳ ರಂಡೆ ಇಷ್ಟೆಲ್ಲಾ ಮಾಡುತ್ತಾಳೆಯೇ! ನೋಡು. ನನಗೆ ಒಂದೂ ತಿಳೀದು, ನಾಳೆ ಅದೇ ಕೆಲಸವಾಗಿ ಬರುತ್ತೇನೆ. ನಾನೂ ನೋಡಬೇಕು' ಎಂದರು. ನಿಜ. ಈ ಗಂಡುಸರಿಗೆ ಏನು ತಾನೇ ಗೊತ್ತಾಗುತ್ತೆ? ಎಲ್ಲಾ ನಾವು ಹೇಳಬೇಕು. ಈ ರಾಜ್ಯದಲ್ಲಿ ಅವರು ಅರಸರಿರಬಹುದು. ಆದರೆ ನಾವು ಮಂತ್ರಿಗಳು. ಮೊದಲಿನಿಂದ ಕೊನೆಯವರೆಗೆ ಎಲ್ಲಾ ನಾವು ಹೇಳಿದ ಹಾಗೆಯೇ! ಪುಟ್ಟೂ ವಿಚಾರ ನಾನೇ ಕಂಡಿರಲಿಲ್ಲ. ಈಗ ಕಂಡೆ, ಹೇಳಿದೆ. ಅವರೂ ಬಂದು ನೋಡುತ್ತಾರೆ. 'ಈ ಮನೆವಾರ್ತೆ ಅನ್ನುವದೆಲ್ಲ ಒಂದು ಮಣ್ಣಿನ ಮುದ್ದೆ. ಅದು ನಾವು ತಿದ್ದಿದ ಹಾಗೆ. ಬೇಕಾದರೆ ವಿನಾಯಕ, ಬೇಡದಿದ್ದರೆ ಅವರಪ್ಪ!' ಎಂದು ಕಾಣುತ್ತದೆ. ಈ ಮಾತು ಇಷ್ಟು ಬೇಗ ಬೇಡ! ಇನ್ನೆರಡು ದಿನವಾಗಲಿ."

ತಾ॥ ೪—೮....

"ಈ ದಿನ ಬೆಳಿಗ್ಗೆ ಎದ್ದದ್ದೇ ಮೊದಲು ನನಗೆ ಬೇರೆ ಯೋಚನೆಯೇ ಇಲ್ಲ. ಸದಾಶಿವನಿಗೆ ಅದೇ ಧ್ಯಾನ ಎನ್ನುವ ಹಾಗೆ ಆಗಿದೆ. ಸಂಜೆ ಎಷ್ಟು ಹೊತ್ತಿಗೆ ಬಂದಾರು, ಪುಟ್ಟೂ ಆಟ ಎಷ್ಟು ಹೊತ್ತಿಗೆ ನೋಡಾರು ಎಂದು ಅದೇ ಹಂಬಲವಾಗಿ ಹೋಗಿದೆ. ಗಡಿಯಾರವೇನಾದರೂ ಮನುಷ್ಯನಾಗಿದ್ದರೆ, ಇದೇನು ಇವಳು ಇಷ್ಟು ಸಲ ನೋಡುವಳು ಎಂದು ರೇಗಿಕೊಳ್ಳುತ್ತಿತ್ತೋ ಏನೋ? ಈ ದಿನ ಸಾರು ಕಲಿಯಬೇಕೆಂದುಕೊಂಡಿದ್ದೆ. ಆದರೆ ಪುಟ್ಟೂ ಯೋಚನೆಯಲ್ಲಿ ಏನೂ ಬೇಕಾಗಲಿಲ್ಲ!"

" ಇವೊತ್ತು ಅವರು ಬಂದಾಗ ಸುಮಾರು ನಾಲ್ಕುವರೆ ಗಂಟೆ. ನಾನು ಐದೂವರೆಗೆ ಬರುತ್ತಾರೆ ಎಂದುಕೊಂಡು ಇನ್ನೂ ತಲೆಯೂ ಬಾಚಿ ಕೊಂಡಿರಲಿಲ್ಲ. ಅವರು ಬಂದೇ ಬಿಟ್ಟರು. ನನಗೇಕೋ ನಾಚುಗೆಯಾಯ್ತು. ಒಳ್ಳೆಯ ಮಾರಿಯ ಹಾಗೆ ತಲೆ ಕೆದರಿಕೊಂಡು ಅವರ ಮುಂದೆ ಹೇಗೆ ನಿಂತು ಕೊಳ್ಳಲಿ ಎಂದುಕೊಂಡಿದ್ದರೆ, ಅವರಿಗೆ ಆ ಘೋರ ರೂಪವೇ ಪ್ರಿಯವಾಯಿ ತೋ ಏನೋ ? ಮರ್ಯಾದೆಯಾಗಿ ಇಲ್ಲಿ ಬನ್ನಿರೀ ಎಂದು ಕರೆದು ಹಾಗೇ ಅಪ್ಪಿಕೊಳ್ಳುವುದೇ ? ಇದೇನು ಗಂಡುಸರು ? ನಾವು ಎಂದುಕೊಂಡಿರುವುದ ಕ್ಕಿಂತ ಇವರೆಷ್ಟು ಬೇರೆ ? ಆ ಬ್ರಹ್ಮ ಈ ಜಾತಿ ಸೃಷ್ಟಿಸುವಾಗ ನಮ್ಮನ್ನು ಕೇಳಬಾರದಾಗಿತ್ತೇ ? ಈ ಜಾತಿಗೆ ಯೂನಿಫಾರ್ಮಿಟಿ, ಕನ್‌ಸಿಸ್ಟೆನ್‌ಸಿ, ಎರಡೂ ಇದ್ದ ಹಾಗಿಲ್ಲ. ಏರಿದ್ದರೊಂದು, ಇಳಿದಿದ್ದರೊಂದು ಎನ್ನುವ ಹಾಗೆ. ಏನಾದರೂ ಆಗಲಿ. ಆ ಉಪಚಾರವೂ ನನಗೆ ಬೇಡವಾಗಲಿಲ್ಲ ಎನ್ನು ವಾಗ, ನಾನೇಕೆ ಅಪೇಕ್ಷಿಸಬೇಕು ? ಅಂತೂ ಅವರನ್ನು ಬುಟ್ಟಿಗೆ ಹಾಕ ಬೇಕು ಎಂದರೆ, ನಾವೂ ಹುಚ್ಚು ಹುಚ್ಚಾಗಿ ಕುಣಿಯಬೇಕು. "

" ಪುಟ್ಟೂನ ಅವರ ಮುಂದೆ ಕುಣಿಸಿದೆ. ಆ ಆಟ ನೋಡಿ ಅವರು ಆಶ್ಚರ್ಯ ಪಟ್ಟು ಹೋದರು. " ನೀನು ಎಂಥವಳು ! ಇದುವರೆಗೆ ನನಗೆ ಹೇಳದೆಯೇ ಇವಳನ್ನು ತಯಾರು ಮಾಡಿ ನನಗೊಂದು ಸರ್‌ಪ್ರೈಜ್ ಇಟ್ಟಿದ್ದೆಯೋ ! " ಎಂದು ನನ್ನ ಕೆನ್ನೆಗೊಂದು ಕೊಟ್ಟರು. ಏಟು ಎಷ್ಟು ಮೃದು ! ಆ ! ನಾನು ಯತ್ನವಿಲ್ಲದೆ, ನಿಜ ಹೇಳಿಬಿಟ್ಟೆ: 'ಆಟ ಕಲಿಸಿದವರು ಆಚೆಯ ಮನೆಯ ಅಜ್ಜಿ ನಾನು ನೋಡಿದುದು ನಿನ್ನೆ!' ಎಂದೆ. ಅವರು ಹಾಗೆಯೇ ಒಂದು ಗಳಿಗೆ ಏನೋ ಯೋಚನೆ ಮಾಡಿ, " ಮಗು ನಮ್ಮದು, ಆಟ ಕಲಿಸಿದವರು ಅವರು, ನೀನು ನೋಡಿದ್ದು ನಿನ್ನೆ, ನಾನು ನೋಡಿ ದುದು ಇವೊತ್ತು. ಎಷ್ಟು ಚೆನ್ನ! " ಎಂದರು. ನನಗೇಕೋ ತಲೆ ಹೊಡೆದು ಹಾಕಿದ ಹಾಗೇ ಆಗಿಹೋಯಿತು. "

" ಆ ಕೊರತೆ ಹೃದಯವನ್ನು ಬಹಳ ಕಲಕಿತು. ಆ ಕೊರಗಿನಲ್ಲಿಯೇ ಅವರಿಗೆ ತಿಂಡಿ ಕಾಫೀ ಮಾಡಿಕೊಟ್ಟೆ. ಮುಖ ಸಣ್ಣಗಾಗಿದ್ದುದನ್ನು ಕಂಡು

“ ಮಹಾಸ್ವಾಮಿಗೆ ನಾನು ಹೇಳಿದ್ದು ಕೋಪ ಬಂತೇನೋ ? ” ಎಂದು ಸಣ್ಣಗೆ ನಕ್ಕು ಗಲ್ಲ ಹಿಡಿದು, ಮುದ್ದಿಸಿ, ‘ ಹಿಂದಕ್ಕೆ ತಪ್ಪು ಮುಂದಕ್ಕೆ ಬುದ್ಧಿ ’ ಯೋಚಿಸಬೇಡ. ಈ ಅಪರಾಧ ಇಬ್ಬರದೂ ಹೌದು. ನಾವು ಪ್ರಪಂಚ ಉದ್ಧಾರ ಮಾಡುತ್ತೇವೆ ಎಂದುಕೊಂಡು ಮನೆಗಳು ಹಾಳು ಮಾಡಿಕೊಳ್ಳುತ್ತಿದ್ದೇವೆ. ಮನೆಯ ಮಕ್ಕಳೂ ಮಂದಿ ಮನುಷ್ಯರಲ್ಲ: ಹೊರಗಿನವರೇ ಮನುಷ್ಯರು ಎಂದು ಅವರ ಸೇವೆ ಮಾಡುವ ನೆಪದಲ್ಲಿ ಮನೆಯವರನ್ನು ಕಾಡು ಪಾಪಗಳನ್ನು ಮಾಡುತ್ತಿದ್ದೇವೆ. ಬಿಡು. ಇನ್ನು ಮುಂದೆ ನಾವು ಹೊರಗಿನ ಯೋಚನೆಗಿಂತ ಮನೆಯ ಯೋಚನೆಯನ್ನು ಮಾಡೋಣ. ” ಎಂದು ಏನೇನೋ ಹೇಳಿ ಸಮಾಧಾನ ಮಾಡಿದರು. ”

“ ಅವರು ಹೇಳುತ್ತಿದ್ದರೆ ಕಣ್ಣಲ್ಲಿ ನೀರೂರಿತು. ಅವರು ಎಲ್ಲೋ ಮಂತ್ರಗಾರರಿರಬೇಕು. ಅದೇನೋ ಮಾಡಿ ನಗಿಸಿಬಿಟ್ಟು ಎಲ್ಲ ಸಂತೋಷಮಯವಾಗಿ ಮಾಡಿಬಿಟ್ಟು ಹೊರಟು ಹೋದರು. ”

“ ಈ ದಿನ ಇನ್ನೇನೂ ಕೆಲಸ ನಡೆಯಲಿಲ್ಲ. ಆ ಮಾತೇಕೋ ಮನಸ್ಸಿಗೆ ಹಿಡಿದುಬಿಟ್ಟಿತು. ‘ ನಾವು ಪ್ರಪಂಚ ಉದ್ಧಾರ ಮಾಡುತ್ತೇವೆ ಎಂದುಕೊಂಡು ಮನೆಗಳು ಹಾಳು ಮಾಡಿಕೊಳ್ಳುತ್ತಿದ್ದೇವೆ. ’ ಈ ಮಾತು ಕಿವಿಯಲ್ಲಿ ಸುಮ್ಮನೆ ಮೊಳಗುತ್ತಿತ್ತು. ”

ತಾ॥ ೫–೮....

“ ಈ ದಿನ ಬಹಳ ಕಷ್ಟಕ್ಕಿಟ್ಟುಕೊಂಡಿತು. ಸಮಾಜದಲ್ಲಿ ಒಂದು ಡಿಬೇಟ್. ಈಚೆಗೆ ಮೂರು ನಾಲ್ಕು ದಿನದಿಂದ ಇಂಗ್ಲಿಷ್ ಮಾತುಗಳು ಹೆಚ್ಚಾಗುತ್ತಿವೆ. ಬಹುಶಃ ಬುದ್ಧಿಗೆ ಯೋಚಿಸುವುದಕ್ಕೆ ತಕ್ಕಷ್ಟು ಅವಕಾಶವಿಲ್ಲವೆಂದು ತೋರುತ್ತದೆ. ಹಿಂದೆ ಸಂಸ್ಕೃತ ಬೇಡವೆಂದು ಸೂಚಿಸಿದ ತಪ್ಪಿಗಾಗಿ ಈಗ ಇಂಗ್ಲೀಷೂ ಬೇಡ ಎನ್ನಬೇಕು ಅಷ್ಟೆ! ಸಮಾಧಾನವಾಗಿ ನೋಡಿದರೆ, ಯಾವ ಭಾಷೆಯಾದರೇನು ? ನಮ್ಮ ಅಭಿಪ್ರಾಯ ಇತರರಿಗೆ ತಿಳಿಯುವುದು ಮುಖ್ಯ! ಏನೋ ಯಾವ ಯಾವ ಮಾತೋ ಹಾಕಿ ಅರ್ಥಾನ

ಮಾಡದಿದ್ದರೆ ಸರಿ. ಅದಿರಲಿ. ಇವೊತ್ತು ನಾನು ಡಿಬೇಟಿನಲ್ಲಿ ಮಾತನಾಡ ಬೇಕುಎಂದು ಹೋದ ತಿಂಗಳಲ್ಲೇ ಗೊತ್ತಾಗಿತ್ತು. ನಾನು ಆ ವಿಷಯವೇ ಮರೆತುಬಿಟ್ಟಿದ್ದೆ. ಸುಮಾರು ನಾಲ್ಕು ಗಂಟೆಯ ವೇಳೆಗೆ ನೋಟೀಸ್ ಬಂತು. ತಪ್ಪಿಸಿಕೊಳ್ಳುವುದಕ್ಕೆ ಇಷ್ಟವಿದ್ದರೂ ಯತ್ನವಿಲ್ಲದೆ ಹೋದೆ."

"ಈ ದಿನ ಡಿಬೇಟಿನ ವಿಷಯ 'ಸ್ತ್ರೀ ಸ್ವಾತಂತ್ರ್ಯ!' ಎರಡೂ ಕಡೆಯವರೂ ಮಾತನಾಡಿದೆವು. ಆದರೇನು? ಸ್ವಾತಂತ್ರ್ಯ ಬೇಡ ಎಂದವರು ಅದೇನು ಎಂಬುದನ್ನು ಕಾಣದವರು: ಬೇಕು ಎಂದವರು ಬಂದರೇನಾಗು ತ್ತದೆ ಎಂಬುದನ್ನು ಅರಿಯದವರು. ನಾನು ಬೇಡ ಎಂತಲೇ ಮಾತನಾಡಿದೆ. ಹುಡುಕಿದರೆ ನಾವು ಆಡಿದ ಮಾತಿನ ಹಿಂದೆ ಸತ್ವವಿರಲಿಲ್ಲ. ಏನೋ ಇಂಗ್ಲಿಷ್ ಪೊಯಿಟ್ರಿ ರಿಸಿಟೇಷನ್ ಮಾಡಿದ ಹಾಗೆ, ಮರೆತು ಮರೆತು ನೆನೆಸಿಕೊಂಡು ಹೇಳಿದ ಹಾಗೆ ಇತ್ತೇ ಹೊರತು, ಈ ಮಹಾತ್ಮ, ಪಂಡಿತ ನೆಹ್ರು ಮೊದ ಲಾದವರು ಮಾತನಾಡಿದ ಹಾಗೆ ತೂಕವೇ ಇರುತ್ತಿರಲಿಲ್ಲ. ನನಗೇನೋ ಮಾತನಾಡುವಾಗ ಈ ಹಾಳು ಡಿಬೇಟ್ ಎಷ್ಟು ಹೊತ್ತಿಗೆ ಮುಗಿದೀತು! ಎಷ್ಟು ಹೊತ್ತಿಗೆ ಮನೆಗೆ ಹೋದೇನು! ಎನ್ನುವ ಯೋಚನೆಯಿತ್ತು. ಅದ ರಿಂದ ನನ್ನ ಮಾತು ಹಾಗೆ ಬೆಂಡು ಬೆಂಡಾಗಿತ್ತು. ಎಲ್ಲರಿಗೇನಾಗಿತ್ತು!"

"ಈ ದಿನ ಪುಟ್ಟೂನ ಬಿಟ್ಟು ಹೋದುದು ಬಹಳ ತಪ್ಪು. ಪಾಪ! ಆ ಪಾಪು ಅದೆಷ್ಟು ಬೇಗ ನನ್ನನ್ನು ಹೊಂದುಕೊಂಡು ಬಿಟ್ಟಿದೆ! ನಾನು ಎತ್ತಿಕೊಂಡರೆ ಅದರ ಆನಂದವೆಷ್ಟು! ಸಮಾಜದ ಡಿಬೇಟಿನಲ್ಲಿ ಮೂರು ಗಂಟೆ ಹೊತ್ತು ಗಂಟಲು ಕಿರಿಚಿಕೊಂಡು ಕೂಗಿಕೊಂಡು ಸ್ವಾತಂತ್ರ್ಯ ಬೇಡ ಎನ್ನುವುದಕ್ಕಿಂತ, ನಮ್ಮ ಪುಟ್ಟೂನ ತೆಗೆದುಕೊಂಡು ಹೋಗಿ ಟೇಬಲ್ ಮೇಲೆ ಕುಳ್ಳಿರಿಸಿ ಬಿಟ್ಟು, ಅದರ ಮಗ್ಗುಲಲ್ಲಿ ನಮ್ಮವರನ್ನು ನಿಲ್ಲಿಸಿ ಬಿಟ್ಟು 'ಈಗ ಹೇಳಿ! ಇಂತಹ ಗಂಡ, ಇಂತಹ ಮಗು ಬೇಕೋ ನಿಮ್ಮ ಹಾಳು ಸ್ವಾತಂತ್ರ್ಯ ಬೇಕೋ' ಎಂದು ಕೇಳಿ ಬಿಡಬೇಕು. ಹೌದು, ಕೆಲ ವರ ಮನೆಯಲ್ಲಿ ಅತ್ತೆ ಮಾವ, ಅತ್ತಿಗೆ ನಾದಿನಿಯರು ಗೋಳು ಹುಯ್ದು ಕೊಳ್ಳುತ್ತಾರೆ. ಅಂಥವರಿಗೆ ಸ್ವಾತಂತ್ರ್ಯ ಬೇಕು. ಗಂಡ ಎಂದರೆ ಅನೇಕರು

ಯುವುಗಂಡ ಎನ್ನುವ ಹಾಗೆ ಇರುತ್ತಾರೆ. ಅವರೂ ಸ್ವಾತಂತ್ರ್ಯ ಬೇಕು ಎಂದಾರು. ಆಗಲಿ. ಇವರನ್ನೆಲ್ಲ ಬುದ್ಧಿವಂತಿಕೆಯಿಂದ ಕೈಕೆಳಗೆ ತೆಗೆದು ಕೊಂಡು ಸುಖವಾಗಿರೋದು ಒಳ್ಳೇದೋ, ಸ್ವಾತಂತ್ರ್ಯ ಬೇಕು ಎಂದು ಇವರನ್ನೆಲ್ಲ ಮನೆಬಿಟ್ಟು ಓಡಿಸಿ ತಾನೇ ತಾನಾಗುವುದು ಒಳ್ಳೆಯದೋ ? ಏನೋ–ಅಂತು ನಮ್ಮವರು ಯೋಚಿಸಿ ಮಾತನಾಡುವುದು ಬಿಟ್ಟು ಪೇಪರು ಗಳಲ್ಲಿ ಬರುವ ಮಾತುಗಳನ್ನಾಡುವುದಕ್ಕೆ ಆರಂಭಿಸಿದ್ದಾರೆ. ಬಹುಶಃ ಇದೂ ಒಂದು ಘಟ್ಟವೋ ಏನೋ ! ''

'' ಈ ದಿನ ನಮ್ಮವರು ಬಂದಮೇಲೆ ಡಿಬೇಟ್ ವಿಚಾರ ಅವರಿಗೂ ಹೇಳಿದೆ. ಅವರು ಅಬ್ಬಾ! ಎಷ್ಟೇ ಆಗಲಿ ಲಾಯರಲ್ಲವೆ ? ' ಆಗಬಹುದು. ಹೆಂಗುಸರಿಗೆ ಸಂಪೂರ್ಣ ಸ್ವಾತಂತ್ರ್ಯವೇ ಬೇಕು. ಇದನ್ನು ನಾನು ಸಂಪೂರ್ಣ ವಾಗಿ ಒಪ್ಪುವವನು ' ಎಂದರು. ಮೊದಲು ನನಗೆ ಅರ್ಥವಾಗಲಿಲ್ಲ. ಆ ಮೇಲೆ ವಿಚಾರಿಸಿದೆ '' ನೋಡು. ಯಾವ ವಿಚಾರನೇ ಆಗಲಿ, ಇರುವ ಖರ್ಚೆಲ್ಲ ಹೆಣ್ಣಿನಿಂದ, ನಾವು ಬೇಕಾದರೆ, ಒಂದಾಣೆ ಬ್ರೆಡ್ ಒಂದಾಣೆ ಕಾಫಿಯಾದರೆ, ನಮ್ಮ ಒಂದು ಹೊತ್ತಿನೂಟ ಮುಗಿದುಹೋಯಿತು. ನಿನಗೆ ಹಾಗೆ ಸಾಧ್ಯವೆ ? ಹಾಗೆಯೇ, ಮೊದಲಿನಿಂದ ಕೊನೆಯುವರೆಗೂ, ಸಂಸಾರದ ಮೂಲಾಧಾರ ಹೆಂಗುಸು. ಅವಳೇ ಸ್ವತಂತ್ರವಾಗಿ ತುಂಟ ಹಸುವಿನ ಹಾಗೆ ಕಿತ್ತುಕೊಂಡು ಓಡಿ ಹೋಗಬೇಕು ಎಂದರೆ ನಾವೇಕೆ ಬೇಡವೆನ್ನಬೇಕು ? ಅದರಿಂದ, ನಮಗೆ ಎಷ್ಟೋ ಅನುಕೂಲ! ನಾವು ಸೋಲ್ಜರ್‌ಗಳ ಹಾಗೆ, ಪಚ್ಚಗಿರುವ ಕಡೆ ಮೇದು ಬೆಚ್ಚಗಿರುವ ಕಡೆ ಮಲಗಿ ಕಾಲ ಕಳೆಯ ಬಹುದು '' ಎಂದರು. ಈ ಮಾತು ನನಗಷ್ಟು ಒಪ್ಪಲಿಲ್ಲ. 'ನಿಜವಾಗಿ ಗಂಡಿಗೆ ಈ ಬುದ್ಧಿ ಬಂದುಬಿಟ್ಟರೆ ಎಷ್ಟು ಅನರ್ಥ!' ಎಂದು ಮಾತ್ರ ದಿಗಿಲಾಯಿತು. ಮಿಕ್ಕಿದ್ದೆಲ್ಲ ಇರಲಿ. ಗಂಡುಸಿಗೆ ಈ ಬುದ್ಧಿ ಬರದೇ ಇರಲಿ ಎಂದಾದರೂ ಹೆಂಗಸು ಸ್ವಾತಂತ್ರ್ಯವು ಬೇಡ ಎಂದಿರಬೇಕು. ''

'' ಇನ್ನೂ ಏನೇನೋ ಬರೆಯಬೇಕು. ಆದರೂ ಇನ್ನೂ ಸ್ವಾತಂತ್ರ್ಯದ ವಿಚಾರವೇ ತಲೆಯಲ್ಲಿ ತುಂಬಿಹೋಗಿದೆ. ಅಧಿಕಾರ ಬೇಕು ಸ್ವಾತಂತ್ರ್ಯ ಬೇಡ

ಎಂದು ನನಗೆ ಎನ್ನಿಸುತ್ತದೆ. ನಮ್ಮ ಸಮಾಜದವರು ಆಡಿದ ಮಾತಿನಲ್ಲಿ ಅಧಿಕಾರವೇ ಇಲ್ಲ; ಅದರಿಂದ ಸ್ವಾತಂತ್ರ್ಯ ಬೇಕು ಎನ್ನುತ್ತಿದ್ದ ಹಾಗೆ ಇತ್ತು. ಈಗ ಸುಮಾರು ಇಪ್ಪತ್ತು ದಿವಸವಾಗಿದೆ ನನಗೆ ಅಧಿಕಾರ ಬಂದು. ನಿಜವಾಗಿಯೂ ಹೆಂಗುಸಿಗೆ ಅಧಿಕಾರ ಬೇಕು ಸ್ವಾತಂತ್ರ್ಯ ಬೇಡ. ಅದೇ ಸರಿಯೆಂದು ನನಗೆ ತೋರುತ್ತದೆ. ಇವೊತ್ತು ಏಕೋ ಆಯಾಸ! ಇಲ್ಲಿಗೆ ಸಾಕು."

ತಾ॥ ೬—೮....

"ಇವೊತ್ತು ಗಂಟಲು ನೋವು. ಹಾಡುವುದಕ್ಕೆ ಆಗಲಿಲ್ಲ. ನಿನ್ನೆ ದಪ್ಪವಾಗಿ ಕೂಗುತ್ತ ಘಟ್ಟಿಯಾಗಿ ಮಾತನಾಡಿದುದರ ಫಲವಿದು ಎಂದು ತೋರುತ್ತದೆ. ಥೂ! ಇನ್ನೂ ಎರಡು ಸಲ ನೋಡುತ್ತೇನೆ. ಮಾತನಾಡಿದಾಗಲೆಲ್ಲ ಹೀಗೇ ಆಗುವುದಾದರೆ, ಇನ್ನು ಮೇಲೆ ಆ ಮಾತೇ ಬೇಡ. ನಮ್ಮ ಸಮಾಜದಲ್ಲಿ ಒಂದು ಲೌಡ್ ಸ್ಪೀಕರ್ ಇದ್ದರೆ ಎಷ್ಟು ಚೆನ್ನ! ಮೃದುವಾಗಿ, ಸಣ್ಣಗೆ, ವೀಣೆ ಬಾರಿಸಿದ ಹಾಗೆ ಮಾತನಾಡಬಹುದು. ಈಗ ಟೇಬಲ್ ಮುಂದೆ ನಿಂತು ಕೂಗಬೇಕು. ಇದು ಯಾರ ಕೈಯಲ್ಲಾದೀತು? ನಮ್ಮ ಸಮಾಜದ ಮೆಂಬರುಗಳೆಲ್ಲ ಮನಸ್ಸು ಮಾಡಿದರೆ—ಇದೇನು ಮಹಾ! ನಾವು ಕೊಂಡುಕೊಳ್ಳುವ ಒಂದೊಂದು ಸೀರೆ ಬೆಲೆಯಾದರೆ ಬೇಕಾದಷ್ಟು ಆಗಿ ಹೋಯಿತು. ಹೌದು. ನಾವೇಕೆ ಹೀಗೆ ಮಾಡಬಾರದು? ಈ ಬೆನಿಫಿಟ್ ನೈಟ್, ಈ ಫಂಡ್, ಈ ಎಲ್ಲ ಪಜೀತಿಗಳೂ ನಿರ್ನಾಮವಾಗುತ್ತವೆ. ನಮ್ಮ ಸಂತೋಷಕ್ಕೆ ನಾವು ಸಮಾಜ ಮಾಡಿಕೊಂಡು, ಕಂಡ ಕಂಡವರನ್ನೆಲ್ಲ ಪೀಡಿಸುವುದು ಎಲ್ಲಿಯ ನ್ಯಾಯ! ಆದರೆ, ನಮ್ಮ ಮೆಂಬರುಗಳಲ್ಲಿ ಎಷ್ಟು ಜನ ಹೀಗೆ ಮಾಡಲು ಸಿದ್ಧವಾಗಿದ್ದಾರೆ! ನಮ್ಮ ಕಮಿಟಿ ಮೆಂಬರುಗಳಲ್ಲಿ ತಾನೇ ಎಷ್ಟು ಜನ ಹೀಗೆ ಮಾಡುವರು? ಮಾತೆತ್ತಿದರೆ, ಮನೆಯಲ್ಲಿ ಅವರನ್ನು ಕೇಳಬೇಕು, ಇವರನ್ನು ಕೇಳಬೇಕು ಎಂದು ಕುಂಟು ನೆಪಗಳನ್ನು ಹೇಳಿ ತಪ್ಪಿಸಿಕೊಳ್ಳುತ್ತಾರೆ. ಇರಲಿ. ಒಂದು ಸಲ ಹೇಳಿ ನೋಡೋಣ."

" ಇವೊತ್ತು ಅವರು ಮೈಸೂರಿಗೆ ಹೋಗಿದ್ದಾರೆ. ಅಡುಗೆ ಎಷ್ಟು ಬಂದಿದೆ ನೋಡುಕೊಳ್ಳುವುದಕ್ಕೆ ಇದೇ ಸಮಯವೆಂದು ಅಡುಗೆಯವನಿಗೆ ರಜಾ ಕೊಟ್ಟೆ, ನನಗೆ ಅಡುಗೆ ಮಾಡುವಾಗ, ಬಟ್ಟೆ ಹತ್ತಿಕೊಂಡೀತು, ಕೈ ಕಪ್ಪಗೆ ಆದೀತು, ಎಂದು ಎಷ್ಟೆಷ್ಟೋ ಯೋಚನೆ! ಅಡುಗೆಯನ್ನು ಕಲಿತೇ ಕಲಿಯಬೇಕೆಂಬ ಹಟ ಹುಟ್ಟದೇ ಹೋಗಿದ್ದರೆ, ಇವೊತ್ತು ಖಂಡಿತ ವಾಗಿಯೂ ಅಡುಗೆಯೇ ಆಗುತ್ತಿರಲಿಲ್ಲ! ಅಂತೂ ಸುಮಾರು ಎರಡು ಗಂಟೆಯ ಹೊತ್ತು ಶ್ರಮಪಟ್ಟು ಅಡುಗೆ ಮಾಡಿದೆ. ಅಭ್ಯಾಸವಿಲ್ಲದ್ದು' ಅದರಿಂದ ಕೊಂಚ ಆಯಾಸವಾಯಿತು. ಅಡುಗೆ ಮಾಡಿದವಳು ಬಂದು ಒಂದು ಗಳಿಗೆ ಮಲಗಿದ್ದೆ. ಆ ಮೇಲೆ ಹೋಗಿ, ಊಟ ಮಾಡಿದೆ. ನನಗೆ ಅಡುಗೆಯು ಬಂತು. ನಿಜವಾಗಿಯೂ ಚೆನ್ನಾಗಿತ್ತು. ತುತ್ತು ತುತ್ತಿಗೂ ಪರೀಕ್ಷೆ ಮಾಡಿ ನೋಡಿಕೊಂಡೆ. ಭಲೆ! ಎನ್ನುವ ಹಾಗಿತ್ತು. ಈ ದಿನ ಅವರು ಇದ್ದಿದ್ದರೆ! ಇನ್ನು ದಿಗಿಲಿಲ್ಲ. ಅಡುಗೆಯ ಆಚಾರ್ರು ನನ್ನ ಮೇಲೆ ಅಧಿಕಾರ ನಡೆಸುವಂತಿಲ್ಲ. ಇವರುಗಳನ್ನೆಲ್ಲ ಅಂಕೆಯಲ್ಲಿಡುವುದಕ್ಕೆ ಇದೇ ಉಪಾಯ! ಈ ಆಳುಗಳು ಇಲ್ಲದಿದ್ದರೆ ನಾವೇ ಅವರ ಕೆಲಸ ಮಾಡಿಕೊಂಡು ಹೋಗಬಲ್ಲೆವು ಎಂಬುದು ಅವರ ಮನಸ್ಸಿಗೆ ಬಂದುಬಿಟ್ಟರೆ ಅವರು ಆಗ ನಾಯಿ ಮರಿಗಳಾಗುವರು ಎಂದು ತೋರುತ್ತದೆ. ಗಾದೆಯಿಲ್ಲವೆ? ಯಾರಿಗೆ ಒಗೆಯುವೆಯೋ ಅಗಸ ಎಂದರೆ ನನ್ನ ಒಗೆಯುವವರಿಗೆ ಎಂದ ನಂತೆ! ಆಳುಗಳ ಸಮಾಚಾರವೆಲ್ಲ ಹಾಗೇ!"

" ಇವೊತ್ತು ಪುಟ್ಟೂ ಜೊತೆಯಲ್ಲಿ ಬಹಳ ಆಟವಾಡಿದೆ. ಆದರೇನು? ಮನಸ್ಸಿಗೆ ಬೇಕಾಗಿದ್ದ ಆಟ ಮತ್ತೊಬ್ಬರೊಡನೆ! ಆದರೂ ಮನಸ್ಸು ಅರ್ಧ ಸಮ್ಮತಿಯನ್ನೇ ಪೂರಾ ಸಮ್ಮತಿಯೆಂದುಕೊಂಡು ಆಟವಾಡಿತು. ಹಾಗಲ್ಲದೆ, ಮನಸ್ಸು ತಾನು ಬೇಕೆಂದಿದ್ದ ವಸ್ತುವೇ ಬೇಕು ಎಂದು ಹಟ ಹಿಡಿದಿದ್ದರೆ, ಏನು ಗತಿ?"

" ಎಷ್ಟು ಆಡುತ್ತಿದ್ದರೂ ಮನಸ್ಸೇನೋ ಖರ್ಜಿಯಕಾಯಿ ಹಾಗೆ, ನೋಡುವುದಕ್ಕೆ ಆಕಾರ ಒಳಗೆಲ್ಲ ಟೊಳ್ಳು ಆಗಿತ್ತು. ಅವರು ಒಂದು ದಿನ

ಕಣ್ಣೆದುರು ಇಲ್ಲದಿದ್ದರೆ ಇಷ್ಟು ಒದ್ದಾಟವೇ? ಇದುವರೆಗೆ ಹೀಗಿರಲಿಲ್ಲ. ಈಗೇಕೆ ಹೀಗೆ? ಇವೊತ್ತು ಇನ್ನೂ ಏನೇನೋ ಬರೆಯಬೇಕು. ಒಂದೂ ಬೇಡ. ನೋಡೋಣ. ಇನ್ನೊಂದು ದಿನ ಬರೆದರಾಯಿತು. ಮನಸ್ಸೆಲ್ಲೋ ಕುರಿ ಕಾಯುವುದಕ್ಕೆ ಹೋಗಿದೆ. ಅದನ್ನು ಹಿಡಿದು ತಂದು ಬರೆಯುವುದಕ್ಕೆ ಕುಳಿತುಕೋ ಎನ್ನುವುದು ಎಂತು ಸಾಧ್ಯ?"

ತಾ|| ೭–೮....

"ಇವೊತ್ತು ಬೆಳಗ್ಗೆ ಬರುವುದಾಗಿ ಹೇಳಿದ್ದರು. ಅವರು ಬರಲಿಲ್ಲ. ಕಾಗದವು ಬಂತು. ನನಗೇಕೋ ರೇಗಿಹೋಯಿತು. ಆ ರೇಗು ತಡೆದದ್ದಕ್ಕೆ ನನಗೇ ಆಶ್ಚರ್ಯ! ಸದ್ಯಕ್ಕೆ ಯಾವುದನ್ನೂ ತೀರಿಸಿಕೊಳ್ಳದೆ ಅದನ್ನೆಲ್ಲ ನುಂಗಿಕೊಂಡೆ. ಅದನ್ನು ಹಾಗೇ ಬಿಟ್ಟು ಬಿಟ್ಟಿದ್ದರೆ ಚೆನ್ನಾಗಿತ್ತೋ ಏನೋ? ಇವೊತ್ತು ನನಗೆ ಮೈಕೈಯೆಲ್ಲ ನೋವು. ಪುಟ್ಟೂ ಬಂದು ಅಮ್ಮ ಎಂದು ತಬ್ಬಿಕೊಂಡು ತಾನೇ ಆಟವಾಡಿದಳು. ಅವಳ ಆಟ ಬೇಕು ಎಂದು ಒಂದು ಸಲ. ಇನ್ನೊಂದು ಸಲ ಈ ಆಟ ಬೇಡ, ಇನ್ನೇನೋ ಆಟ ಬೇಕು ಎಂದು. ಎಲ್ಲದಕ್ಕಿಂತ ಹೆಚ್ಚಾಗಿ ಆ ಚೇಷ್ಟೆಗಳ ನೆನಪೇ ನೆನಪು. ಎಲ್ಲಿ ಹೋಗಿ ಕುಳಿತರೂ ಇಲ್ಲಿ ಹೀಗೆ ಅಲ್ಲಿ ಹೀಗೆ ಎಂದು ನೆನಪಾಗುವುದು, ಅವರೇ ಬಂದಂತಾಗುವುದು, ನಾಚಿ ತಲೆ ಬಗ್ಗಿಸಿಕೊಳ್ಳುವಂತಾಗುವುದು, ಜೊತೆಯಲ್ಲಿಯೇ ಅವರಿಲ್ಲವೆಂಬ ಅರಿವು ಬಂದು, ಮನವು ನೊಂದು, ಪೆಚ್ಚು ಮುಖದಿಂದ ತಲೆಯೆತ್ತುವುದು. ಥೂ! ಇವೊತ್ತೆಲ್ಲ ಇದೇ ನಾಟಕವಾಗಿ ಹೋಯ್ತು."

"ಇವೊತ್ತು ನಾನೇ ಅಡಿಗೆ ಮಾಡಿದೆ. ಇವೊತ್ತೂ ಅಡುಗೆಯು ಚೆನ್ನಾಗಿತ್ತು. ಇವೊತ್ತು ಮಧ್ಯಾಹ್ನ ಕಾಫಿ ತಿಂಡಿ ಬೇಕು ಎನ್ನಿಸಿತು. ನಾನು ಮಾಡಲಿಲ್ಲ. ಸರಿ! ನಾನೊಬ್ಬಳು ಮಾಡಿಕೊಂಡು ತಿನ್ನುವದಕ್ಕೆ ಯಾವ ಬೆಕ್ಕು ಅಳುತ್ತದೆಯೆಂದು ಸುಮ್ಮನಾಗಿಬಿಟ್ಟೆ! ಆ ಹೊತ್ತಿಗೆ ಪುಟ್ಟೂ ಒಂದು ಲೋಟಾ ಹಿಡಿದುಕೊಂಡುಬಂದು, ಅಮ್ಮಾ! ಎಂದಿತು. ನನಗಾಗಿ ಬೇಡವಿದ್ದರೆ

ಈ ಮಗುವಿಗೇಕೆ ಇಲ್ಲದೆ ಹೋಗಬೇಕು ಎಂದು ಅದಕ್ಕೆ ಹೋಟಲಿನಿಂದ ಕಾಫಿ ತರಿಸಿಕೊಟ್ಟೆ. ಅದರಲ್ಲಿ ನಾನೂ ಅಷ್ಟು ಕುಡಿದು ನೋಡಿದೆ. ಛೀ ! ನಮ್ಮ ಮನೆಯ ಸೀಗೇಕಾಯಿನ ನೀರಾದರೂ ವಾಸಿ, ಅದೇನು ಕಾಫೀ ! ಈ ಕಾಫೀಗೆ ಹೋಟಲಿಗೆ ಹೋಗುವ ಜನರು ಅದೆಷ್ಟು ಸಾವಿರ ! ಅಯ್ಯೋ ! ಹಾಳು ಕಾಫಿ ! ಇದನ್ನು ಕುಡಿಯದಿದ್ದರೆ ಉಳಿದು ಹೋಗುವುದಾದರೂ ಏನೋ ! ಹೋಟೇಲಿನವನು ತನಗೆ ದುಡ್ಡು ಬರಲಿ ಎಂದು. ಕಾಫೀ ಮಾಡುವವನೇ ಹೊರತು ಕುಡಿದವನು ಬದುಕಲಿ ಎಂದಲ್ಲ. ಅದೊಂದು ವ್ಯಾಪಾರ! ನಮ್ಮ ಮನೆ ಅಡುಗೆಯವನ ಹಾಗೇ! ಅದಕ್ಕೆ ಅವನನ್ನೇಕೆ ಬಯ್ಯಬೇಕು ?"

"ಇವೊತ್ತು ಸಮಾಜಕ್ಕೆ ಹೋಗಿದ್ದೆ. ಆಟಗಳೊಂದೂ ಬೇಕಾಗಲಿಲ್ಲ. ಮನಸ್ಸಲ್ಲಿ ಒಂದೇ ಒಂದು ಮೂರ್ತಿಯು ಮೇಲೆ ನಿಂತುಬಿಟ್ಟಿದೆ. ಇನ್ನು ಯಾವುದಕ್ಕೂ ಆ ಮನಸ್ಸಿನಲ್ಲಿ ಅವಕಾಶವಿಲ್ಲ. ನಾನೇನು ಮಾಡಲಿ? ಹಾಗೇ ಲೈಬ್ರರಿಯ ಕಡೆಗೆ ಹೋದೆ. ಅಲ್ಲಿ ಅಬ್ಬಾ! ಬರಿಯ ಇಂಗ್ಲಿಷ್ ಪುಸ್ತಕಗಳು. ನಮ್ಮ ಕನ್ನಡದ ಕಡೆಗೆ ತಿರುಗಿದರೆ, ಸರಿ. ಅದೂ ಇದೂ ಅಷ್ಟೆ! ಹಿಂದಿನ ಕಾಗೆ ಗೂಗೆ ಕಥೆಗಳ ಬದಲು ಈಗಿನ ಸಿಂಗಿ ಮಂಗಿ ಕಥೆಗಳು! ಅವರ ಮನೆಯಲ್ಲಿ ಹಾಗಾಯ್ತು ಇವರ ಮನೆಯಲ್ಲಿ ಹೀಗಾಯ್ತು ಎಂದು ಮುಚ್ಚಿಡಬೇಕಾದ್ದೆಲ್ಲ ಈಚೆಗೆ ತಂದು ಬಿಚ್ಚಿ ಹಾಕಿ ತೋರಿಸುವ ಮಾನಗೆಟ್ಟ ಕಥೆಗಳಷ್ಟು. ಅಸಂಬದ್ಧವಾಗಿ ತೋರಿದ್ದೆಲ್ಲ ಹೇಳುವ ಕವೀಶ್ವರರ ಕಥೆಗಳಷ್ಟು!"

"ಹೊಸ ಪುಸ್ತಕಗಳ ನಡುವೆ ನೋಡಿದೆ ಔಟ್‌ಲೈನ್ ಆಫ್ ಮಾಡರ್ನ್ ನಾಲೆಜ್ ಎಂದು ಒಂದು ಪುಸ್ತಕ. ನಮ್ಮಲ್ಲಿ ವಿದ್ವಾಂಸರಿಲ್ಲವೆ? ತಿಳಿದವರಿಲ್ಲವೆ? ಅವರು ಕೊಂಚ ವಿರಾಮ ಮಾಡಿಕೊಂಡು ಅಂಥ ಪುಸ್ತಕಗಳನ್ನು ಬರೆಯಬಾರದೆ? ಈ ಮಾಸ ಪತ್ರಿಕೆಗಳ ತುಂಬಾ ಏನೇನೋ ಬರೆದು ತುಂಬಿ ಮುಗಿಸುವ ಬದಲು, ಅಂಥವುಗಳನ್ನು ಬರೆಯಬಾರದೆ ಎನ್ನಿಸಿತು. ಬಹುಶಃ ಅವರಿಗೆ ಸಾಧ್ಯವಿಲ್ಲವೇನೋ ? ಅವೊತ್ತು ಪೇಪರಿನಲ್ಲಿ ಬಂದಿತ್ತಲ್ಲ— ಅವರೊಬ್ಬ ದೊಡ್ಡ ಮನುಷ್ಯರು ಮಧುಗಿರಿಯಲ್ಲಿ ಕನ್ನಡ

ಬರೆಯುವವರು ಆಶೆಯಿಂದ ಕನ್ನಡದಲ್ಲಿ ಬರೆದ ತಪ್ಪಿಗೆ ಸಾಲಗಾರರ ಮಕ್ಕಳಾಗದಂತೆ ನೋಡಿಕೊಳ್ಳಿ ಎಂದು ಹೇಳಿದರೆಂದು ! ಹಾಗೆ ಇದ್ದೀತು. ಏನೇನೋ ಬರೆಯುತ್ತಾರಲ್ಲ, ನಮಗೆ ಬೇಕಾದ್ದು ಬರೆಯಲಾರದೆ? ಸರಕಾರದವರಾದರೂ ಬರೆಸಬಾರದೆ ? ''

'' ಸಮಾಜದಲ್ಲಿ ಬಹಳ ಹೊತ್ತು ನಿಲ್ಲಲಾರದೆ ಹೋದೆ. ಏಕೋ ಎಲ್ಲೆಲ್ಲೂ ಬಿಕೊ ಬಿಕೊ ! ಮನಸ್ಸಿಗೆ ಏನೂ ಬೇಡ, ಯಾವುದೋ ಒಂದು ಮ್ಯಾಗಜೀನ್ ಹಿಡಿದುಕೊಂಡು ಬಂದಿದ್ದೆ, ಅದರಲ್ಲಿ ಅದೆಷ್ಟು ಫೋಟೋ. ಅಂದೆಂತಹ ಪ್ರಿಂಟ್ ! ಅದೆಲ್ಲ ನೋಡಿದೆ, ಏಕೋ ನನಗೆ ವ್ಯಥೆಯಾಯಿತು. ನಮ್ಮಲ್ಲಿ ಯಾವೊತ್ತು ಹೀಗಾಗುವುದು ! ಎಂದು ಸಂಕಟವಾಯ್ತು. ಜೊತೆಯಲ್ಲಿಯೇ, ಯಾವೊತ್ತು ನಾವು ನಮ್ಮ ಅರಳೇ ಪೇಟೆ ಸೀರೆ, ಕಲಾಬತ್ತು ರವಕೆಗಳ ಹಣದಲ್ಲಿ ಅರ್ಧವಾದರೂ ಈ ಪುಸ್ತಕ ಮ್ಯಾಗಜೀನ್‌ಗಳಿಗೆ ಕೊಡುತ್ತೇವೆಯೋ ಅವೊತ್ತು ಇಂಥಾವು ಬಂದಾವು, ಅದುವರೆಗಿಲ್ಲ, ಎನ್ನಿಸಿತು. ನಿಜ ! ಸಿನೀಮಾ, ನಾಟಕ, ಎಂದರೆ ದಿನಕ್ಕೆ ಐದು ಆರು ರೂಪಾಯಿ ಲಕ್ಷ್ಯವಿಲ್ಲದೆ ಕೊಡುತ್ತೇವೆ. ಯಾರಾದರೂ ಸಂಪಾದಕರು ಬಂದು ' ನಮ್ಮ ಮಾಸಪತ್ರಿಕೆಗೆ ತೆಗೆದುಕೊಳ್ಳಿ. ವರ್ಷಕ್ಕೆ ಮೂರು ರೂಪಾಯಿ, ಎಂದರೆ, ' ಇರಲಿ ನೋಡೋಣ ಬರುವ ತಿಂಗಳು ಬನ್ನಿ ' ಎನ್ನುತ್ತೇವೆ. ಅವರು ಹೇಗೆ ಬದುಕಬೇಕು ? ಅವರ ಪತ್ರಿಕೆ ಹೇಗೆ ಬೆಳೆಯಬೇಕು ? ಏನೋ ಇವೊತ್ತೆಲ್ಲ ಇದೇ ಯೋಚನೆಗಳಾಯ್ತು. ಅವರಿದ್ದಾಗ ಏಕೆ ಈ ಯೋಚನೆಗಳೊಂದೂ ಬರುವುದಿಲ್ಲ ? ''

ತಾ|| ೮ – ೮. . . .

'' ಇವೊತ್ತು ಬಂದರು. ಅವರನ್ನು ಕಂಡು ಹೊರಟುಹೋಗಿದ್ದ ಜೀವವು ಮರಳಿ ಬಂದದಾಯ್ತು. ಅವರಿಗೂ ಸಂತೋಷವಾಗಿರಬೇಕು: '' ಏನು ಪ್ರಭು ಚೆನ್ನಾಗಿದ್ದೀರಾ ? '' ಎಂದು ಹಾಗೆಯೇ ಅರ್ಧಾಲಿಂಗನದಿಂದ ಉಪಚರಿಸಿ ಮಾತನಾಡಿಸಿದರು. ಅನು ಯಾವುದೋ ಪುಸ್ತಕದಲ್ಲಿದೆ '' ಗಂಡನ ಎದುರು ನಿಂತು ತಾನು ಬೇರೆ ಎಂಬ ಅರಿವಿರುವವಳು ಎಂತಲೋ

ಏನೋ ? ನನಗೂ ಹಾಗೇ ಆಯ್ತು. ಒಂದುಗಳಿಗೆ ನೈವೇಲೆ ಜ್ಞಾನವೇ ಇರಲಿಲ್ಲ. ಅದೆಂತಹ ಸೌಖ್ಯ ಅದು ! ಎರಡು ದಿನದಿಂದ ಇಲ್ಲ ಇಲ್ಲ ಎಂದು ಅತ್ತಿದ್ದುದೆಲ್ಲ ಸಾರ್ಥಕವಾಯ್ತು.''

'' ಇವೊತ್ತು ಮಿಂಚಿನ ವೇಗದಿಂದ ಕಾಫಿ ತಿಂಡಿ ಮಾಡಿದೆ, ನಾನೇ ಅವರ ಬಾಯಿಗೆ ತಿಂಡಿ ಇಟ್ಟು ಕಾಫಿ ಕುಡಿಸಬೇಕೆಂದೂ ಆಶೆಯಾಯ್ತು. ಅವರೆದುರು ನಾನು ಈ ಮಾತನಾಡಿಬಿಟ್ಟರೆ ಅವರೇನಾದರೂ ಹಾಸ್ಯ ಮಾಡಿ ಬಿಡುತ್ತಾರೆಯೆಂದು ಹೆದರಿ ಸುಮ್ಮನಿದ್ದೆ. ಪಾಪ ! ಅವರಿಗೆ ರಾತ್ರಿ ಪ್ರಯಾಣ ಅದೆಷ್ಟು ಆಯಾಸವಾಗಿತ್ತೊ ಹಾಗೇ ಹಾಸಿಗೆ ಉರುಳಿಸುಕೊಂಡು ಮಲಗಿ ಒದ್ದಾಡುತ್ತಿದ್ದರು. ತಿಂಡಿ ತೆಗೆದುಕೊಂಡು ಹೋದೆ ! 'ಹಾಗೇ ಬಾಯಿಗೆ ನೀವೇ ಹಾಕಿಬಿಡಿರಿ !' ಎಂದರು. ನನ್ನಾಸೆ ಅವರಿಗೆ ಹೇಗೆ ತಿಳಿ ಯಿತು ? ನಾನೂ ಬೇಕೋ ಬೇಡವೋ ಅನ್ನುವ ಹಾಗೆ ದೂರ ನಿಂತುಕೊಂಡು ಕೈಯ್ಯಿಂದ ಅಷ್ಟು ತೆಗೆದು ಬಾಯಿಗಿಟ್ಟೆ. ಅಬ್ಬಾ ! ಅವರದು ಅದೆಂತಹ ಚೇಷ್ಟೆ ಸ್ವಭಾವ ! ನನ್ನ ಬೆರಳು ಕಚ್ಚಬೇಕೆ? ನನಗೆ ನೋವಾಗುವುದೆಂಬ ಯೋಚನೆಯೂ ಬೇಡವೆ ?''

'' ನಾನೂ ಸ್ಪೂನ್ ತರುತ್ತೇನೆಂದೆ, 'ಅಯ್ಯೋ ! ಮಂಕು ದಿಣ್ಣೆ !' ಎಂದು ಹತ್ತಿರಕ್ಕೆ ಎಳೆದು ಕೂರಿಸಿಕೊಂಡು, '' ನನ್ನನ್ನು ಒರಗಿಕೊಂಡು ಕುಳಿತು ಬಾಯಿಗೆ ಅಷ್ಟಷ್ಟು ಕೊಡು. ಏನೋ ಒಂದು ಸಲ ಗಟ್ಟಿಯಾಗಿ ಕಚ್ಚಿದರೆ ನಿನ್ನ ಗಂಟೇನು ಹೋದುದು !'' ಎಂದರು. ನಾನೂ ಹಾಗೇ ಮಾಡಿದೆ. ಆ ಉಪ್ಪಿಟ್ಟು ನಜ್ಜಿಗೆ ಮುಗಿಯುವುದರೊಳಗಾಗಿ ನ್ನೈ ಕೈಯೆಲ್ಲ ಎಂಜಲಾಗಿ ಹೋಯಿತು. ಎರಡು ಮೂರು ಸಲವಂತೂ ಕಚ್ಚಿದ್ದು ಹಲ್ಲು ಕೂಡ ಊರಿ ಬಿಟ್ಟಿತ್ತು. ಆಗ ನೊಂದರೂ, ದಿನವೆಲ್ಲ ಆ ಸುಖದ ನೆನಪಾಗಿ ಹಿತವಾಗಿತ್ತು.''

'' ಈ ದಿನ ಏನೇನು ಮಾಡಿದೆನೋ ಏನೋ ಒಂದು ನೆನಪೇ ಆಗ ಲೊಲ್ಲದು. ಮನಸ್ಸೆಲ್ಲ ಸ್ವಾಮಿಯ ಲೀಲಾ ಪ್ರಪಂಚದ ಒಲ್ಮೆಯನ್ನು ನೆನೆ ನೆನೆದು ಎಂಕ್ಕೆಲ್ಲವನ್ನೂ ಮರೆತುಬಿಟ್ಟಿದೆ. ನನಗಿನ್ನೇನೇನೂ ಬೇಡ. ನನ್ನ

ಸ್ವಾಮಿಯೊಬ್ಬರೇ ನನಗೆ ಬೇಕು. ಮರೆತೆ. ಪುಟ್ಟೂ ಕೂಡ ಬೇಕು. ಅವಳಿಲ್ಲ ದಿದ್ದರೆ, ಅವರಿಲ್ಲದಾಗ ನನ್ನ ಜೊತೆಗಾರರು ?"

ತಾ॥ ೧೦—೮. . . .

" ನಿನ್ನೆ ಬರೆಯುವುದು ಬೇಡ ಎನ್ನಿಸಿತು. ಬರೆಯದಿದ್ದರೆ ಅವರೇ ನಾದರೂ ಎಂದುಕೊಂಡಾರು: 'ಇವಳಿಗೆ ಎಷ್ಟು ಜಂಭ! ನಾನು ಹೇಳಿದರೂ ಬರೆಯಲಿಲ್ಲವಲ್ಲ' ಎಂದುಕೊಂಡಾರು ಎಂದು ಬರೆಯು ತ್ತಿದ್ದೇನೆ. ಅವರಿಲ್ಲದಾಗ ಅದೇನೋ ಬಹಳ ಬೇಸರ! 'ಗಂಡಸರು ಮೂರು ಹೊತ್ತೂ ಮನೆಯಲ್ಲಿ ಕುಳಿತಿರಲು ಸಾಧ್ಯವೇ?' ಎಂದು ವಿವೇಕ ಹೇಳಿ ಕೊಳ್ಳುತ್ತೇನೆ. ಆದರೂ ಆ ಮನಸ್ಸು ನನಗೆ ಬೇಕಾದುದು ಇದು ಎಂದು ಒಂದು ಚಿತ್ರವನ್ನು ತಪ್ಪದೇ ತಂದು ಕಣ್ಣೆದುರು ಹಿಡಿಯುತ್ತದೆ. 'ಅವರಿಲ್ಲದಿದ್ದರೂ ಕಣ್ಣು ಅವರ ರೂಪವನ್ನು ಕಂಡು, ಕಿವಿಯು ಅವರ ಮಾತುಗಳನ್ನು ಕೇಳುವಾಗ, ಅವರು ಪ್ರತ್ಯಕ್ಷವಾಗಿ ಇಲ್ಲದಿದ್ದರೇನು?' ಎಂದೂ ಒಂದೊಂದು ವೇಳೆ ನನ್ನನ್ನು ನಾನೇ ಕೇಳಿಕೊಳ್ಳುತ್ತೇನೆ. ಆದರೂ ನನ್ನ ಮನಸ್ಸಿನ ಸೃಷ್ಟಿಗಿಂತಲೂ ಬೇರೆಯಾದ ಬ್ರಹ್ಮಸೃಷ್ಟಿಯು ಅವರೇ ಬೇಕು. ಅವರ ಮೂಲ ವಿಗ್ರಹವನ್ನು ನೋಡಿ ಚಿತ್ರಿಸಿದ ಈ ಉತ್ಸವ ವಿಗ್ರಹಕ್ಕೆ ನನಗೆ ತೋರಿದ ಉಪಚಾರವನ್ನೆಲ್ಲ ಮಾಡಿದರೂ ಈ ವಿಗ್ರಹವು ನನಗೆ ಬೇಕಾದ ಆಟಗಳನ್ನೆಲ್ಲ ಆಡಿದರೂ, ಮೂಲ ವಿಗ್ರಹವು ಬೇಕೇ ಬೇಕು. ಅಲ್ಲಿ ನನಗೆ ತೋರಿದಂತೆ ಆಡುವಂತ ಇಲ್ಲ. ಆದರೂ ಅಲ್ಲಿನ ಆನಂದದ ಒಂದು ಬಿಂದು ಇಲ್ಲಿನ ಒಂದು ಕಡಲು ಅಥವಾ ಇಲ್ಲಿನ ಕಡಲು ಅಲ್ಲಿನ ಒಂದು ಬಿಂದುವಿಗೂ ಸರಿಯಿಲ್ಲ."

"ಈ ದಿನವೂ ಮನಸ್ಸಿಗೆ ಆಯಾಸ. ಮುಂದೆ ಬರೆಯಲಾರೆ. ಕೊನೆಯ ಮಾತು. ಈ ದಿನ ಇದೇ ಬರಿಯ ಮನಸ್ಸಿನಲ್ಲಿಯೇ ಸಮಾಜಕ್ಕೂ ಹೋಗಿದ್ದೆ. ಸಮಾಜಕ್ಕೆ ಹಣವಿಲ್ಲ ಅವರನ್ನು ಕೇಳಬೇಕು ಇವರನ್ನು ಕೇಳಬೇಕು ಎಂದು ಏನೇನೋ ತೆಗೆದರು. ನಾನು ಮೊದಮೊದಲು

ಸುಮ್ಮನಿದ್ದವಳು ಕೊನೆಗೆ "ನಾವು ಕಮಿಟಿ ಮೆಂಬರುಗಳೆಲ್ಲ ನೂರು ನೂರು ರೂಪಾಯಿ ಕೊಟ್ಟು ಬಿಡೋಣ, ಒಟ್ಟು ಒಂದು ಸಾವಿರ ರೂಪಾಯಿ ಆಯಿತು. ಪ್ರೆಸಿಡೆಂಟರು ಇನ್ನೂರು ರೂಪಾಯಿ ಕೊಟ್ಟು ಬಿಡಲಿ. ಈ ವರ್ಷವೆಲ್ಲ ನಾವು ಬೇರೆ ಯೋಚನೆಯಿಲ್ಲದೆ ಸಮಾಜ ನಡೆಸಿ ಬಿಡೋಣ" ಎಂದು ಬಿಟ್ಟೆ. ಆಗ ನಮ್ಮ ಮಿತ್ರರು ಆಡಿದ ಮಾತುಗಳನ್ನೆಲ್ಲ ಇಲ್ಲಿ ಬರೆಯಬಾರದು. ಆ ಪುಣ್ಯಾತ್ಮಗಿತ್ತಿ ರಂಗಮ್ಮ ಮಾತ್ರ ಇದೋ "ನಾನು ರೆಡಿ" ಎಂದಳು. ಇಂಥವರಿಂದ ಸಮಾಜಗಳು ಬದುಕಬೇಕು. ನಾನೇನೋ "ನಾವು ಈಕೆಯನ್ನು ಸೆಕ್ರೆಟರಿ ಮಾಡಿದ್ದು ಸಾರ್ಥಕ ವಾಯ್ತು." ಎಂದುಬಿಟ್ಟೆ. ಮಿಕ್ಕವರ ಮುಖ ಹೇಗಾಯ್ತೋ?"

ತಾ॥ ೧೨—೮....

"ನಿನ್ನೆ ಸಮಾಜದ ಕಮಿಟಿ ಮೆಂಬರಷಿಪ್ಪಿಗೆ ರಾಜೀನಾಮೆ ಕಳುಹಿಸಿ ಬಿಟ್ಟೆ. ರಂಗಮ್ಮನವರು ಬಂದು ಬಹಳ ಪೇಚಾಡಿದರು. ಹತ್ತು ರೂಪಾಯಿ ಕೊಟ್ಟು ಸ್ವಾತಂತ್ರ್ಯ ಕೊಂಡುಕೊಂಡೆ. ಇನ್ನುಮುಂದೆ ವಾರಕ್ಕೊಂದು ಸಲ ಹೋಗಿ ಕುಳಿತುಕೊಂಡು ಆ ಹರಟೆಯಲ್ಲಿ ಕಾಲ ಕೊಲ್ಲಬೇಕಾದ ಅಗತ್ಯವಿಲ್ಲ. ಆ ಹೊತ್ತು ಇಲ್ಲಿ ಪುಟ್ಟು ಜೊತೆಯಲ್ಲಿ ಆಟವಾಡುತ್ತಿದ್ದರೆ ಎಷ್ಟೋ ಸುಖ! ನಾವು ಬದುಕುವುದು ಸುಖ ಪಡುವುದಕ್ಕೆ! ಬೇಕಾದವರ ಜೊತೆಯಲ್ಲಿರುವುದು ಸುಖ, ಬೇಡವಾದವರ ಜೊತೆಯಲ್ಲಿರುವುದು ದುಃಖ! ಮೊದಲು ಮನೆಯಲ್ಲಿ ಏಕೋ ಬೇಸರ ವಾಗಿದ್ದಾಗ ನನಗೆ ಸಮಾಜ ಬೇಕಿತ್ತು. ಈಗ ಅಲ್ಲಿ ಬೇಸರ! ಮನೆಯನ್ನು ಬಿಟ್ಟು ಹೊರಗೆ ಹೋಗುವುದಕ್ಕೆ ಮನಸ್ಸಿಲ್ಲ. ನಾನು ಸಮಾಜವನ್ನು ಏನು ಮಾಡಿಕೊಳ್ಳಲಿ?"

"ಈ ದಿನದಿಂದಲೇ ಅಡುಗೆಯವನನ್ನು ಓಡಿಸಿ ಬಿಡಬೇಕೆಂದಿದ್ದೆ. ಬದನೆಯಕಾಯಿ ಚೆನ್ನಾಗಿತ್ತು. ಹುಳಿ ಮಾತ್ರಯ್ಯಾ ಬಿಡದರೆ ಸಪ್ಪು ಮಾಡಿ ಕೂರಿಸಿದ. ಬಹು ಕೋಪ ಬಂತು. ಅವರು ನನ್ನ ಮನಸ್ಸನ್ನು ತಿಳಿದೇ ಇಲ್ಲ.

'ಪಲ್ಯ ಬಹಳ ಚೆನ್ನಾಗಿದೆ. ಇನ್ನಷ್ಟು ತೆಗೆದುಕೊಂಡು ಬಾ' ಎಂದರು: ಆಚಾರಿ ಉಳಿದ. ಕೆಲವು ವೇಳೆ, ನನ್ನ ಇಚ್ಛೆಗೆ ವಿರೋಧವಾಗಿ ಬೇಕೂ ಎಂದು ನಡೆಯುತ್ತಾರೆ. ಇವೊತ್ತು ಹಾಗೆಯೇ ಆಗಿರಬೇಕು. ಇರಲಿ. ಎಂದು ರಾತ್ರಿಗೆ ಹುಳಿ ಎದುರಿಗೆ ನಿಂತು ಮಾಡಿಸಿದೆ. ಜೊತೆಗೆ ಎರಡು ಉಪ್ಪು ಮೆಣಸಿನಕಾಯೀ ಇತ್ತು. ಈಚೆಗೆ 'ಸಂಜೆಗೂ ನೀ ಮೊಸರು ಮಾಡಿರುತ್ತೀನೆ. ಊಟವಾಗುವಾಗ ಏನು ಹೇಳುತ್ತಾರೆ ನೋಡೋಣ ಎಂದು ಕಾದಿದ್ದೆ. ಒಂದು ಮಾತೂ ಆಡದೆ ಸುಮ್ಮನೆ ಊಟ ಮಾಡಿ ಎದ್ದು ಬಿಟ್ಟರು. 'ಇದೇಕೆ ಹೀಗಾಯ್ತು? ನಾನಾದರೂ ಮಾತನಾಡಿಸಿದ್ದರೆ ಚೆನ್ನಾಗಿ ತ್ತಿಲ್ಲ''ಎಂದುಕೊಂಡು ಕರೆಕರೆ ಪಡುತ್ತ ಕೈ ತೊಳೆದುಕೊಂಡು ಎದ್ದು ಬಂದೆ. ಕೊನೆಗೆ ಅಡಕೆಲೆ ಹೊತ್ತಿನಲ್ಲಿ ಗುಟ್ಟು ಈಚೆಗೆ ಬಂತು. ಅಬ್ಬಾ! ಅವರು ಅದೆಷ್ಟು ಬುದ್ಧಿವಂತರು ! ನನ್ನ ಮನಸ್ಸಿನಲ್ಲಿದ್ದುದನ್ನು ಅದು ಹೇಗೆ ಭೇದಿಸಿಬಿಟ್ಟಿದ್ದಾರೆ: "ನೋಡು. ನೀನು ಮಧ್ಯಾಹ್ನವೇ ಹುಳಿ ಮಾಡಿಸ ಬೇಕು ಎಂದುಕೊಂಡಿದ್ದೆ. ಆಗ ಅವನೆಲ್ಲೋ ಮರೆತೋ ಏನೋ ಪಲ್ಯ ಮಾಡಿಬಿಟ್ಟ. ಅದಕ್ಕಾಗಿ ನೀನು ಹಟ ಹಿಡಿದು ಈಗ ಹುಳಿ ಮಾಡಿಸಿದೆ. ಈಗ ಹುಳಿ ಬಹಳ ಚೆನ್ನಾಗಿತ್ತು. ಆ ಸಪ್ಪೆ ಪಲ್ಯಕ್ಕಿಂತ ಹುಳಿಯೇ ಚೆನ್ನ! ಆದರೆ ನಾನು ಮಾತನಾಡಿದರೆ, ನೀನು ಅಡುಗೆಯವನ ಮೇಲೆ 'ಗರಂ' ಆಗಿ ಹೋಗುತ್ತೀಯೆ ಎಂದು ನಾನು ಏನೂ ಮಾತನಾಡಲಿಲ್ಲ. ತಪ್ಪು ಮಾಡುವುದೇ ಮನುಷ್ಯ ಸ್ವಭಾವ ! ಅದರಿಂದ ಅವನನ್ನೇನೂ ಅನ್ನಬೇಡ ಎಂದು ಸಮಾಧಾನ ಮಾಡಿದರು."

"ಈಗ ನನಗೂ ಮನಸ್ಸು ಬದಲಾಯಿಸಿದೆ. ಅಡುಗೆಯೇನೋ ಬಂದುಬಿಟ್ಟಿದೆ. ಆದರೂ ಬಡಿಸುವುದಕ್ಕಾದರೂ ಒಬ್ಬರಿರಬೇಕು. ಇಲ್ಲದಿದ್ದರೆ ಊಟವಾದಕೂಡಲೇ ಅವರಿಗೆ ಅಡಕೆಲೆ ಕೊಡುವುದಕ್ಕೆ ಇಲ್ಲದೇ ಹೋಗು ತ್ತದೆ. ಅಲ್ಲದೇ ಬಡವ ! ಇರಲಿ. ದೇವರು ನಾವು ಮಾಡುವ ಸಾವಿರಾರು ತಪ್ಪುಗಳನ್ನು ಹೊಟ್ಟೆಯಲ್ಲಿ ಹಾಕಿಕೊಂಡು ನಮ್ಮನ್ನು ಕಾಪಾಡುವಾಗ, ನಮ್ಮ ಬಳಿ ಬಂದು ಸೇರಿಕೊಂಡಿರುವವರ ಎರಡು ಮೂರು ತಪ್ಪು ನಾವೇಕೆ ಮನ್ನಿಸಬಾರದು ?"

ತಾ॥ ೧೫–೮....

" ಇವೊತ್ತು ಬಹಳ ವಿನೋದ. ಅವರು ಎಲ್ಲೂ ಹೋಗಲಿಲ್ಲ. ಮನೆಯಲ್ಲಿಯೇ ಇದ್ದರು. ಹದಿನೈದು ದಿನದ ಲೆಕ್ಕ ನೋಡಿದರು. ನಾನು ಅಡುಗೆ ಮಾಡಿದ್ದು ಊಟ ಮಾಡಿದರು. ಮಗುವಿನ ಜೊತೆಯಲ್ಲಿ ಆಟವಾಡುವುದು ಕಂಡರು. ಅವರು ಇವೊತ್ತು ಬೆಳಗಿನಿಂದ ಬಹಳ ಮರ್ಯಾದೆಯಾಗಿದ್ದಾರೆ. ಅದು ನನಗೆ ಸಮ್ಮತವಿಲ್ಲ. ಇದೇನು ಗಂಡಸರು ಮರದ ಬೊಂಬೆಗಳ ಹಾಗೆ ಇದ್ದರೆ, ಅದು ಯಾವ ದೇವರಿಗೆ ಒಪ್ಪಿಗೆ? ಅವರು ಏನಾದರೂ ಚೇಷ್ಟೆ ಮಾಡುತ್ತಿರಬೇಕು. ಅದು ಬಿಟ್ಟು ಹೀಗೆ ಗುಡುಂ ಎಂದಿದ್ದರೆ!"

" ಇದೇಕೆ ಎಂಬುದು ಸಂಜೆಯವರೆಗೂ ತಿಳಿಯಲಿಲ್ಲ. ಇವೊತ್ತು ಅವರೇ ಹೋಗಿ ಒಳ್ಳೆಯ ಪರಿಮಳದ ಹೂವು ಕಟ್ಟಿಸಿಕೊಂಡು ಬಂದಿದ್ದಾರೆ. ನನಗೆ ಹೇಳಬಾರದಾಗಿತ್ತೆ? ಇಲ್ಲ. ದಿಂಬಿನ ಹಿಂದೆ ಮುಚ್ಚಿಟ್ಟಿದ್ದಾರೆ. ನಾವು ಊಟಗೀಟ ಎಲ್ಲ ಮುಗಿಸಿಕೊಂಡು ಹೋದಾಗ, 'ಕೊಂಚ ತಡೆ, ಎಲ್ಲೋನೋ ಇದ್ದ ಹಾಗಿದೆ' ಎಂದರು. ಇವೊತ್ತು ಇವರೇಕೆ ಹೀಗಿದ್ದಾರೆ ಎಂದು ಯೋಚಿಸುತ್ತಿದ್ದ ನನಗೆ ಆ ಹೂವಿನ ವಾಸನೆ ಕೂಡ ಸಿಕ್ಕಲಿಲ್ಲ. ಅಲ್ಲಿ ನೋಡಿದರೆ ಮೆತ್ತಗೆ ಒಂದು ಪೊಟ್ಟಣ. ಹೂವು ಎನ್ನುವುದು ತಿಳಿಯಿತು. ನಾನು ಬಿಚ್ಚುವುದಕ್ಕೆ ಹೋದೆ. ಅವರು ಕೈಯಿಂದ ಕಿತ್ತುಕೊಂಡು "ಕೊಂಚ ತಡೆಯಿರಿ ಇವೊತ್ತು ನಾನು ಹೇಳಿದಂತೆ ಕೇಳಿರಿ" ಎಂದು ಮಂಚದ ಮೇಲೆ ಕುಳ್ಳಿರಿಸಿ ಆ ಹೂವು ಬಿಚ್ಚಿ ಒಂದು ಹಾರ ಮಾಡಿ ನನ್ನ ಕತ್ತಿಗೆ ಹಾಕಿ, "ಗೃಹಲಕ್ಷ್ಮಿ! ಇನ್ನು ಮುಂದೆ, ಮನೆ ಅಧಿಕಾರವೆಲ್ಲ ವಹಿಸಿಕೊಂಡು ಮಾನವಾಗಿ ಕಾಪಾಡಿಕೊಂಡು ಬಾ!" ಎಂದು ಕೈಮುಗಿದು ಬಿಟ್ಟರು."

" ನನಗೇನೇನೋ ಆಗಿಹೋಯ್ತು. ಅವರ ಮುಖ ನೋಡಿದಾಗ, ಬೆಳಗಿನಿಂದ ಬೇಕು ಎಂತ ದೂರದಲ್ಲಿದ್ದುದು ಈ ನಾಟಕ ಮಾಡುವುದಕ್ಕೆ ಎಂದು ತಿಳಿದುಹೋಯ್ತು. ಆ ಮುಖದಲ್ಲಿ ಅದೆಂತಹ ಅಂದಚೆಂದಗಳು. ಹಾಳು ಕಣ್ಣಿನಲ್ಲಿ ನೀರು ಬಂದು, ಮನಸ್ಸಿನಲ್ಲಿ ನಾಚಿಗೆ ಮೂಡಿ,

ತಲೆಯೆತ್ತಿ ನೋಡಲಾರದೆ ಹೋದೆ. ಮತ್ತೊಮ್ಮೆ ಆ ಮುಖ ಹಾಗೆ ನೋಡುವುದಕ್ಕೆ ಅವಕಾಶ ಸಿಕ್ಕಿದರೆ, ನನ್ನ ಆಯುಸ್ಸಿನಲ್ಲಿ ಅರ್ಧವಾದರೂ ಸರಿ ಕೊಟ್ಟೇನು !"

"ಅವರು ಅದೇನೇನೋ ಮಾಡಿಬಿಟ್ಟರು. ಕೊನೆಗೆ ಆ ಉಪಚಾರ ತರಂಗಿಣಿಯಲ್ಲಿ ಕೊಚ್ಚಿ ಹೋಗುತ್ತಿದ್ದ ನನ್ನನ್ನು ಹಾಗೆಯೇ ತಮ್ಮ ತೋಳುಗಳಿಂದ ಹಿಡಿದುಕೊಂಡು, "ಅಧಿಕಾರ ವಹಿಸಿಕೊಂಡೆಯಷ್ಟೇ!" ಎಂದು ಕೇಳಿದರು. ನನಗೆ ಮೊದಲು ಅಧಿಕಾರಬೇಕು ಅಧಿಕಾರಬೇಕು ಎನ್ನಿಸುತ್ತಿತ್ತು. ಈಗ ಆ ಅಧಿಕಾರವು ಬಂದು ಎದುರು ನಿಂತಾಗ ಅದೇಕೋ ದಿಗಿಲಾಯಿತು. ಎದ್ದು, ಪಾದ ಮುಟ್ಟಿ ಕಣ್ಣಿಗೆ ಒತ್ತಿಕೊಂಡು "ನಾನು ಚರಣದಾಸಿ. ಹಾಗಿರುವುದೇ ನನಗೆ ಸುಖ. ನನಗೆ ಅಧಿಕಾರವೇಕೆ ?" ಎಂದೆ. ಅವರು ಮತ್ತೆ ಬರಸೆಳೆದು ಅಪ್ಪಿಕೊಂಡು "ಹಾಗಲ್ಲ ನೀನು ಸ್ವರ್ಗಧಾಮದ ದೇವಿ ! ನನ್ನ ಮನೆಯನ್ನು ಉದ್ಧರಿಸಲು ಬಂದಿರುವ ಗೃಹ ಲಕ್ಷ್ಮಿ! ನೀನು ಅಧಿಕಾರವನ್ನು ವಹಿಸಿಕೊಂಡು ನನ್ನ ಭಾರವನ್ನು ಇಳು ಹಿಸು. ಈ ಮಂದಿರವನ್ನು ನಂದನ ವನವನ್ನು ಮಾಡು" ಎಂದರು. ನಾನು ಬೇಡವೆಂದು ಹೇಳಹೋದೆ. ಅಷ್ಟರೊಳಗೆ ತುಟಿಗಳು ಪಿಟಪಿಟ ಎನ್ನುವು ದಕ್ಕೂ ಅವಕಾಶವಿಲ್ಲದಂತೆ ಅವರ ಬಾಯಿಯು ನನ್ನ ಬಾಯಿಯನ್ನು ಮುಚ್ಚಿಬಿಟ್ಟಿತು."

* * * *

ಇನ್ನು ಮುಂದೆ ನಾನು ಡೈರಿಯನ್ನು ಬರೆಯಕೂಡದಂತೆ. ಅದು ಬಹಳ ಡ್ಯಾಮೇಜಿಂಗ್! **ಬೇಡ,** ಎಂದು ನನ್ನ ದೇವರ ಅಪ್ಪಣೆಯಾಗಿದೆ. ಇದು ವರೆಗೆ ಬರೆದುದನ್ನು ನನ್ನ ಸ್ವಾಮಿಯ ಚರಣಾರವಿಂದಕ್ಕೆ ಒಪ್ಪಿಸಿಬಿಟ್ಟಿದ್ದೇನೆ.

———

# ಅದರ ಫಲ

"ನಿನ್ನ, ಅಲ್ಲ, ನಿಮ್ಮ ಕಾಗದವು ಬಂದಿತು. ನೀವು ನನಗೆ ತೋರಿರುವ ಆದರವು ಮನಸ್ಸಿನಲ್ಲಿದ್ದ ಮೋಹವನ್ನು ಇಮ್ಮಡಿಸಿದೆ. ನೀವು ಎಂದಿನಂತೆ ಬನ್ನಿ. ನನ್ನಿಂದ ಸೇವೆಯನ್ನು ಸಲ್ಲಿಸಿಕೊಂಡು ನನ್ನನ್ನು ಕೃತಾರ್ಥನನ್ನು ಮಾಡಿ.

ಇತಿ,

—ದಾಸ"

ಸ್ವಾಮಿಯು ಕಾಗದವನ್ನು ಮತ್ತೊಮ್ಮೆ ಓದಿದನು. ಸಣ್ಣ ನಗು ಬಂದಿತು: "ಹೌದು: ಎರಡೇ ಮಾತು. ಅದರಲ್ಲಿ ಒಂದು ಸುಳ್ಳು. ಇನ್ನೊಂದು ನಿಜವಲ್ಲ. ಅದೇ ಮೋಹದ ಹಾದಿ. ನಿಜವನ್ನು ಹೇಳಿ ಕೊಲ್ಲುವುದಕ್ಕಿಂತ ಸುಳ್ಳು ಹೇಳಿ ನಲಿಸುವುದು ಎಷ್ಟೋ ಒಳ್ಳೆಯದು. ಮನುಷ್ಯನು ನಿಜ ಹೇಳಿ ದಕ್ಕಿಸಿಕೊಳ್ಳುವಷ್ಟು ದೊಡ್ಡವನೂ ಅಲ್ಲ: ಸುಳ್ಳು ಹೇಳಿ ಕಳೆದುಕೊಳ್ಳುವಂತಹ ದಡ್ಡನೂ ಅಲ್ಲ" ಎಂದು ನಗು ನಗುತ್ತಾ ಕಾಗದವನ್ನು ಮಡಿಸಿ ಕವರಿನೊಳಗಿಟ್ಟು ಅದನ್ನು ಅಂಟಿಸಿದನು. ಇನ್ನೊಂದು ಗಳಿಗೆಯೊಳಗಾಗಿ ಕಾಗದವು ನಿರ್ದಿಷ್ಟ ಸ್ಥಳದ ಹಾದಿ ಹಿಡಿದಿತ್ತು.

ಸ್ವಾಮಿಯು ಒಂದು ಸಿಗರೇಟು ಹಚ್ಚಿ ಕುಳಿತನು. ಸುಮಾರು ಏಳೂವರೆ ಗಂಟೆಯಿರಬಹುದು. ಉತ್ತಮವಾದ ಕಾಫಿಯು ಒಂದು ಮೇಜಿನ ಮೇಲೆ ಸಣ್ಣಗೆ ಹಬೆಯಾಡುತ್ತ ಕುಳಿತಿದೆ. ಗೆಣೆಯನೊಬ್ಬನು ಬಂದನು. ಅಂದವಾದ ದಿರಸು. ನೋಡುವುದಕ್ಕೆ ಕೂಡ ಅಂದವಾಗಿದ್ದಾನೆ.

ಸ್ವಾಮಿಯು ಅವನನ್ನು ಹಾಗೆಯೇ ಒಂದು ಗಳಿಗೆ ನೋಡಿದನು. ಮುಖದ ಒಂದು ಕಡೆಯು ಮಾತ್ರ ನಗುತ್ತಿತ್ತು. "ಹೌದು, ಕೆಲಸವಾಯಿತೋ?"

ಬಂದವನು ಮೇಜಿನ ಮೇಲಿದ್ದ ಸಿಗರೇಟ್ ಡಬ್ಬಾ ತೆಗೆದುಕೊಂಡು ಒಂದು ಸಿಗರೇಟ್ ತೆಗೆದು ಹಚ್ಚಿಕೊಂಡು, ಹೇಳಿದನು: "ಹೋಗಿರುವ ಪನು ನಾನು. ಕೆಲಸವಾಗುವುದಿಲ್ಲ ಎಂದರೇನು ? ಕೆಂಪನು ಊರಲ್ಲಿಲ್ಲ. ಅಪನಿನ್ನು ಮೂರು ದಿನಕ್ಕೆ ಬರುತ್ತಾನೆ. ಅವನು ಬಂದ ವಾರನೇ ದಿನವೇ ನಮ್ಮ ಕೆಲಸವಾಗುತ್ತದೆ."

"ಹಕ್ಕಿಯನ್ನು ಕಂಡಿದ್ದೆಯಾ?"

"ನೋಡಿದ್ದೆ. ಬೇಟೆಗೆ ಯೋಗ್ಯವಾಗಿದೆ. ಇದು ಯಾವುದು ಈ ಕಾಗದ ?"

"ತೆಗೆದುಕೊಂಡು ನೋಡು."

ಓದಿದನು: "ದೇವ ! ಹಗಲಿರುಳೂ ತಮ್ಮದೇ ಹಂಬಲ. ಪುನಃ ತಮ್ಮ ದರ್ಶನ ಮಾಡಿ ತಮ್ಮನ್ನು ಸೇವಿಸಬೇಕೆಂದು ಮನಸ್ಸು ತವಕಪಡುತ್ತಿದೆ. ಏನು ಮಾಡಬೇಕೆಂಬುದು ತಮಗೆ ಗೊತ್ತಿದೆ.

ಇತಿ,

ನೀ."

"ಸರಿ. ಅವಳು ನಿನ್ನ ವಿಚಾರದಲ್ಲಿ ಯಾವಾಗಲೂ ಹೀಗೆಯೇ! ಅವಳಿಗೆ ನಿನ್ನ ಮೇಲೆ ಬಹಳ ವಿಶ್ವಾಸ!"

ಸ್ವಾಮಿಯು ಸೇದುತ್ತಿದ್ದ ಸಿಗರೇಟಿನ ಮೇಲೆ ಕುಳಿತಿದ್ದ ಬೂದಿಯನ್ನು ಉದುರಿಸಿ, ಒಂದು ಗಳಿಗೆ ಉರಿಯುತ್ತಿದ್ದ ಬೆಂಕಿಯನ್ನು ನೋಡುತ್ತಿದ್ದು, "ಹೌದು ! ನಿಜ. ಆದರೆ, ನನ್ನ ಮನಸ್ಸು ಮಾತ್ರ ಹೊತ್ತು ಹೊತ್ತಿಗೆ ಹೊಸ ಹೊಸ ಶೃಂಗಾರ ಬೇಕು ಎನ್ನುತ್ತದೆ." ಎಂದನು.

"ಏನು ಉತ್ತರ ಬರೆದೆ ?"

"ಗೊತ್ತೇ ಇದೆ."

"ಎಂದರೆ ಬಾ ಎಂತಲೇ !"

"ಬರದಿರುವುದಕ್ಕೆ ಎಷ್ಟೊ ಅಷ್ಟು !"

"ಹಾಗೂ ಅವಳು ಬಂದರೆ ?"

" ನಷ್ಟವಿಲ್ಲ. "

" ಇವೊತ್ತು ನಿನಗೆ ಮಾತನಾಡುವ ಮನಸ್ಸಿಲ್ಲ ? "

" ಹೌದು. "

" ಹಾಗಾದರೆ ನಾನು ಹೊರಡುತ್ತೇನೆ. "

" ನಿನ್ನ ಇಷ್ಟ ! "

" ಕಾರಣವೇನೆಂದು ಕೇಳಬಹುದೇ ? "

" ನೀನು ಕೇಳಬಹುದು. ಆದರೆ ಅದನ್ನು ಹೇಳುವುದೂ ಬಿಡುವುದೂ ನನ್ನ ಇಷ್ಟ ! "

" ಒಂದೊಂದು ಸಲ ನೀನು ಹೀಗೆ ವಕ್ರನಾಗುವೆಯಲ್ಲ ! ಅದೇಕೆ? "

" ನನಗೆ ಅದರಲ್ಲಿ ಒಂದು ಸೌಖ್ಯವಿದೆ. ತೋರಿದಂತೆ ಮಾಡುವು ದಷ್ಟೇ ನನ್ನ ಕೆಲಸ. ಮಾಡಿದ ಕೆಲಸಕ್ಕೆಲ್ಲ ಕಾರಣವನ್ನು ಹುಡುಕುವುದು ನನಗೆ ಬೇಕಿಲ್ಲ. "

" ಇವೊತ್ತು ಸರದಿಯಾರದು ? "

" ಯಾರಿಗೆ ದುಡ್ಡು ಬೇಕಾದರೆ ಅವರದು. "

" ನಾನು ಹೊರಡುತ್ತೇನೆ. "

" ಕಾಫೀ ತೆಗೆದುಕೊಂಡು ಹೊರಡು. ನಾನೂ ಸ್ನಾನಕ್ಕೆ ಹೊರಡು ತ್ತೇನೆ. "

" ಬರಿಯ ಕಾಫೀಯೆ ? "

" ಅದು ಸರಿ. ನನ್ನ ಪ್ರಪಂಚದಲ್ಲಿ ಬೇಕಾದವರು ಬೇಕಾದು ದನ್ನು ಕೇಳಿ ತೆಗೆದುಕೊಳ್ಳಬೇಕು. ಹೋಗು, ಬೇಕಾದ್ದು ಬೇಕಾದಷ್ಟು ತೆಗೆದುಕೋ ! "

ಅವನು ಎದ್ದು ಹೋಗಿ ಗೋಡೆಯಲ್ಲಿದ್ದ ಕಪೋಡು ತೆಗೆದು ಶೀಸೆ ಬಟ್ಟಲುಗಳನ್ನು ತಂದನು. ಸ್ವಾಮಿಗೆ ನೈವೇದ್ಯ ಮಾಡಿ ಅಪ್ಪಣೆ ಪಡೆದು ತನಗೆ ಬೇಕಾದಷ್ಟು ಹೀರಿದನು. ತೃಪ್ತನಾಗಿ ಒಂದು ಗಳಿಗೆ ಏನೇನೋ ಅಸಂಬದ್ಧವಾಗಿ ಹರಟಿ ಹೊರಟುಹೋದನು.

ಸ್ವಾಮಿಯ ಮನಸ್ಸು ಅವನನ್ನು ನೋಡಿ "ನನಗಾಗಿ ನೀನೋ? ನಿನಗಾಗಿ ನಾನೋ?" ಎಂದು ವಿಚಾರಿಸುತ್ತಿತ್ತು.

*  *  *  *

ಸುಮಾರು ಒಂಭತ್ತುವರೆ ಗಂಟೆ. ಸ್ವಾಮಿಯು ಸ್ನಾನಾದಿಗಳನ್ನು ನೆರವೇರಿಸಿಕೊಂಡು ಬಂದು ಕುಳಿತಿದ್ದಾನೆ. ಎದುರಿಗಿದ್ದ ಕನ್ನಡಿಯು ತೋರುತ್ತಿರುವ ತನ್ನ ಪ್ರತಿಬಿಂಬವನ್ನು ಗಮನಿಸಿ ನೋಡುತ್ತಿದ್ದಾನೆ. ಏಕೋ ಏನೋ ಮನಸ್ಸು ಸುಖವೂ ದುಃಖವೂ ಅಲ್ಲದ ಒಂದು ಸ್ಥಿತಿಯಲ್ಲಿ ನಿರಾತಂಕವಾಗಿ ಕುಳಿತಿತ್ತು. ಅಭ್ಯಾಸ ಬಲದಿಂದ ಕೈಯ್ಯು ಸಿಗರೇಟನ್ನು ತೆಗೆದು ಹಚ್ಚಿತು. ಬಾಯಿ ಸೇದಿತು. ಮನಸ್ಸು ಮಾತ್ರ ಯಥಾ ಯಥಾ ಕುಳಿತಿತ್ತು.

ಹತ್ತು ಗಂಟೆಯಾಯಿತು. ಬಾಗಿಲಿನಲ್ಲಿ ಕಾರಿನ ಸದ್ದಾಯಿತು. ಸ್ವಾಮಿಯು ಬಗ್ಗಿ ನೋಡಿದನು. ತನ್ನ ಚೆಲುವನ್ನು ಹೆಚ್ಚಿಸುವ ಸಿಂಗರದಿಂದ ಸುಂದರಳಾಗಿದ್ದ ಚೆಲುವೆಯೊಬ್ಬಳು ಕಾರಿಂದ ಇಳಿದು ಬಂದಳು. ಸ್ವಾಮಿಯು ಆಕೆಯನ್ನು ಕಂಡು ಬೆಚ್ಚಿದನು.

"ಮನೆಯಲ್ಲಿಲ್ಲ ಎಂದು ಹೇಳಿಸಿಬಿಡೋಣ" ಎನ್ನಿಸಿತು. "ಬೇಡ! ಪ್ರಾರಬ್ಧ ಬಂದಿದೆ. ಈ ನಾಟಕ ಮುಗಿಸಿಯೇ ಬಿಡೋಣ" ಎಂದು ನಿರ್ಧರ ಮಾಡಿಕೊಂಡು ನಗುವಿನ ಮೊಕವಾಡ ಹಾಕಿಕೊಂಡು ಕುಳಿತನು.

ಚೆಲುವೆಗೆ ಮನೆಯು ಅಪರಿಚಿತವಿದ್ದಂತೆ ತೋರಲಿಲ್ಲ. ಆದರೂ ಆಳು ಬಂದು ದಾರಿ ತೋರಿಸುತ್ತ ಕರೆದುತಂದನು. ಆಕೆಯು ಬಂದಿರುವುದು ಸ್ವಾಮಿಗೆ ಅರಿಕೆಯಾಯ್ತು. ಅವಳೂ ಬಂದಳು. ಆಳು ಬಾಗಿಲು ಸೇರಿಸಿಕೊಂಡು ಹೋದನು.

ಸ್ವಾಮಿಯು ಎದ್ದು ಕೈಯ್ಯಲ್ಲಿದ್ದ ಸಿಗರೇಟಿನ ತುಂಡನ್ನು ಅತ್ತ ಇಟ್ಟು, "ಪ್ರಭುಗಳವರು ದಯಮಾಡಬೇಕು. ಭಾರಿಯ ಅನುಗ್ರಹ" ಎಂದು ಬಹು ಮರ್ಯಾದೆಯಿಂದ ಅವಳನ್ನು ಬರಮಾಡಿಕೊಂಡು ಕುಳ್ಳಿರಿಸಿದನು.

"ಹೂಂ ಇದೆಲ್ಲ ಸುಳ್ಳು! ಈ ಹಾಳು ಪ್ರಾರಬ್ಧ ಏಕೆ ಬಂದು ಎಂತು ಕೊಳ್ಳುತ್ತಿದ್ದೀಯೆ ಮನಸ್ಸಿನಲ್ಲಿ." ಎಂದಳು ಚೆಲುವೆ.

ಸ್ವಾಮಿಯು “ನಿಜ! ಮನಸ್ಸಿನಲ್ಲಿರುವುದನ್ನು ಕಂಡುಹಿಡಿಯು ವುದರಲ್ಲಿ ಇವಳೆಷ್ಟು ಚದುರೆ”ಯೆಂದುಕೊಂಡು ಮೆಚ್ಚುತ್ತಾ “ಬೆಳಗೆದ್ದು ಈ ತಿರಸ್ಕಾರ ಭಾರವನ್ನು ಹೇರಿಸಲು ತಾವೇ ಬರಬೇಕಾಗಿತ್ತೇ?” ಎಂದನು.

ಪಾಪ! ಆಕೆಯು ಅಪ್ರತಿಭಳಾದಳು. ಮುಖವು ರಾಗರಂಜಿತ ವಾಯ್ತು. ಸ್ವಾಮಿಯು ಹೆಣ್ಣಿನಲ್ಲಿ ಆದ ಅದಷ್ಟು ನೋವನ್ನೂ ತಡೆಯು ಲಾರದೆ ಥಟ್ಟನೆ ಮನಸ್ಸು ಬದಲಾಯಿಸಿ, ಮಗ್ಗುಲಲ್ಲಿ ಕುಳಿತು ಮೋಹದ ಲಹರಿಯಲ್ಲಿ ಮನಸ್ಸನ್ನು ಬುದ್ಧಿಪೂರ್ವಕವಾಗಿ ಹರಿಯ ಬಿಟ್ಟು “ಚುಚ್ಚುವ ಮಾತೇಕೆ ಚಿನ್ನಾ? ನೀನು ಚೆಲುವೆ. ಈ ಲೋಕಕ್ಕೆ ಲೋಕವೇ ಚೆಲುವಿ ನಾಗರ. ನಾನು ಚೆಲುವಿನ ಭಕ್ತ. ಹೀಗಿದ್ದು, ಚೆಲುವಾದ ಮಾತುಗಳಿದ್ದೂ ಚುಚ್ಚುವ ಮಾತೇಕೆ? ಇಷ್ಟು ವಿಸ್ತಾರವಾದ ಪ್ರಪಂಚದಲ್ಲಿ ನಾವಿಬ್ಬರು ಮಾತ್ರ ಸುಖಿಗಳಾಗಿರಲು ಅವಕಾಶವಿಲ್ಲವೆ?” ಎಂದನು.

ಹೆಣ್ಣು ಉಬ್ಬಿತು. ಅದನ್ನು ಕಂಡು ಗಂಡೂ ಗೆಲುವಾಯಿತು: ಕಣ್ಣಿನಲ್ಲಿ ಊರಿದ ಒಂದೆರಡು ತೊಟ್ಟು ಹಾಗೆಯೇ ತಡೆದುಕೊಂಡು “ಗೋಪಾಲ! ನಿನಗಾಗಿ ನಾನು ಸರ್ವವನ್ನೂ ಬಿಡಲು ಸಿದ್ಧಳಾಗಿರುವೆನು ಎಂದು ಅರಿಯೆಯಾ?” ಎಂದು ಆರಂಭಿಸಿದಳು. ಸ್ವಾಮಿಯು ಅದನ್ನು ಕಂಡು, “ನೀಲಾ! ಈ ಮಾತುಗಳು ಇಲ್ಲಿ ಬೇಡ, ಬಾ!” ಎಂದು ಒಳಕ್ಕೆ ಕರೆದುಕೊಂಡು ಹೋದನು.

ಆ ಕೋಣೆಯು ಸುಸಜ್ಜಿತವಾದುದು. ಶ್ರೀಮಂತನೂ ಉದಾರಿಯೂ ಆದ ಭೋಗಿಯು ವಿಶ್ವಾಸದಿಂದ ಎಲ್ಲವನ್ನೂ ಶ್ರಮಪಟ್ಟು ಸಿದ್ಧಪಡಿಸಿರು ವಂತೆ ತೋರುತ್ತಿತ್ತು. ಸೊಗಸಾದ ಸೋಫಾಗಳು, ಅಲ್ಲಲ್ಲಿ ಪುಟ್ಟ ಪುಟ್ಟ ಮೇಜುಗಳು, ಮೂಲೆಯಲ್ಲಿ ಮನೋಹರವಾದ ಗಂಧರ್ವ ಬೊಂಬೆಗಳು, ಗೋಡೆಯ ಮೇಲೆ ಭವ್ಯವಾದ ಚಿತ್ರಗಳು. ಎತ್ತ ನೋಡಿದರೂ ಒಂದು ಅಂದ, ಒಂದು ಚೆಂದ. ಎಲ್ಲದಕ್ಕಿಂತ ಹೆಚ್ಚಾಗಿ ಮನೋಹರವಾದ ಪನ್ನೀರು ವಾಸನೆ. ಆ ಸ್ಥಳಕ್ಕೆ ಬಂದಕೂಡಲೇ ಆಯಾಸವೆಲ್ಲವೂ ಪರಿಹಾರವಾಗಿ ಮನ ಸ್ಸಿಗೆ ಒಂದು ಹೊಸ ರೂಪವು ಬಂದಂತಾಗುವುದು.

ನೀಲೆಯು ಆ ಕೋಣೆಯನ್ನು ಕಂಡು ಸಮಾಧಾನಪಡುವುದಕ್ಕೆ ಪ್ರತಿಯಾಗಿ ಅಸಮಾಧಾನಪಟ್ಟು ಉದ್ವಿಗ್ನಳಾದಳು. ಗೋಪಾಲನೂ ತನಗೆ ಅಸಮಾಧಾನವಾದರೂ ನಗುತ್ತ "ಇರಲಿ! ಬಾ! ನಾವು ಬೇಕು ಎಂದು ಹಂಬಲಿಸುವುದು ಒಂದು ಬಿಟ್ಟು ಮಿಕ್ಕೆಲ್ಲವೂ ನಮಗೆ ತಾನಾಗಿ ಸಿಕ್ಕುವುದು. ಅದೇ ಈ ಪ್ರಪಂಚ! ಅದಕ್ಕಾಗಿ ದುಃಖಿಸುತ್ತ ಕುಳ್ಳಿರು ವುದೇ? ನಿನಗೇನು ಕಮ್ಮಿಯಾಗಿದೆ? ದೇಹದಲ್ಲಿ ರೂಪವಿದೆ, ಯೌವನವಿದೆ, ಆರೋಗ್ಯವಿದೆ. ಮನೆಯಲ್ಲಿ ಐಶ್ವರ್ಯವು ತುಂಬಿದೆ. ಮನದಲ್ಲಿ ಆಶೆಯು ತಾನೇ ತಾನಾಗಿದೆ. ಈ ನಗರದಲ್ಲಿ ನೀಲಾಂಬಿಕೆ ದರ್ಶನವಾದೀತೆ? ಕೃತಾ ರ್ಥರಾದೇವೆ? ಎಂದು ಎಷ್ಟೋ ಜನರು ಕಾದಿದ್ದಾರೆ. ಹೀಗಿರಲು ನೀನೇಕೆ ಕಣ್ಣೀರು ಕರೆಯಬೇಕು? ಕಣ್ಣೇಕೆ ಕೆಂಪಾಗಬೇಕು? ನಿನ್ನ ಮುಖವೇಕೆ ವ್ಯಥೆಯಿಂದ ಕಳೆಗುಂದಬೇಕು?" ಎಂದನು.

ನೀಲಳು ಎಲ್ಲವನ್ನೂ ಕೇಳಿದಳು. ಆಕೆಗೆ ಅವನ ಮಾತುಗಳನ್ನು ಕೇಳಿ ಶೋಕ ರೋಷಗಳು ಎರಡೂ ಹೆಚ್ಚಿದುವು: "ಹೌದು, ನಿಜ! ನೀನು ಹೇಳಿದ ಇದಿಷ್ಟೂ ನಿಜ! ಇನ್ನೂ ಒಂದು ಮಾತೂ ಹೇಳದೆ ಹೋದೆ. ನೀಲೆಯನ್ನು ಮಹಾಲಕ್ಷ್ಮಿಯೆಂದು ಪೂಜಿಸುವವರೂ ಇದ್ದಾರೆ. ಎಲ್ಲದಕ್ಕಿಂತ ಹೆಚ್ಚಾಗಿ ನೀಲೆಯನ್ನು ನೀಲೋತ್ಪಲಕ್ಕಿಂತಲೂ ಹೆಚ್ಚೆಂದು ಭಾವಿಸಿ ಕಣ್ಣೆವೆಯೊಳ ಗಿಟ್ಟುಕೊಂಡು ಕಾಪಾಡುವ ನೆಂಟರಿಷ್ಟರೂ ಇದ್ದಾರೆ" ಎಂದು ಗತ್ತಿನಲ್ಲಿ ಹೇಳಿದಳು. ಇನ್ನು ಮುಂದೆ ಮಾತನಾಡಲು ಸಾಧ್ಯವಾಗಲಿಲ್ಲ. ಕತ್ತಿನ ನರ ಗಳು ಬಿಗಿದು, ಶೋಕವು ತಾನೇ ತಾನಾಗಿ, ಆ ಶೋಕದ ಆವೇಗದಲ್ಲಿ ತನ್ನ ಪ್ರಿಯನ ಕಂಠವನ್ನು ಆಲಿಂಗಿಸಿಕೊಂಡು, ಮತ್ತೆ ದೈನ್ಯದಿಂದ ಬಹು ಕಷ್ಟ ಪಟ್ಟು ಹೇಳಿಕೊಂಡಳು: "ಗೋಪಾಲ! ದೇವರು ಎಲ್ಲವನ್ನೂ ಕೊಟ್ಟಿದ್ದಾನೆ. ಆದರೆ, ನೀನು ಬರುವವರೆಗೆ, ನೀನು ಈ ದಾಸಿಯನ್ನು ಮುಟ್ಟುವವರೆಗೆ ನಾನು ನನ್ನ ಸಮರಿಲ್ಲವೆಂದು ಮೆರೆಯುತ್ತಿದ್ದೆ. ನಿನ್ನನ್ನು ಕಂಡಂದಿನಿಂದ ಈ ಮನಸ್ಸು ಬೇರೆಯಾಗಿಹೋಗಿದೆ. ನೀನು ನನ್ನವನಲ್ಲದೆ ಹೋದರೆ, ನನ್ನ ಬಾಳು ದೇವರಿಲ್ಲದ ಗುಡಿಯಂತಾಗುವುದು. ಹಾಗೆ ಮಾಡಬೇಡ. ನನ್ನ

ಸರ್ವಸ್ವವನ್ನೂ ಬೂದಿಯಲ್ಲಿ ಹೋಮಮಾಡಿದಂತೆ ಮಾಡಬೇಡ. ನನ್ನನ್ನು ಕಾಪಾಡು. ಇದೋ ನಿನಗಾಗಿ, ಏನು ಮಾಡಬೇಕಾದರೂ ಸಿದ್ಧವಾಗಿರುವೆನು. ನನ್ನ ಕೈ ಹಿಡಿದು ಕಾಪಾಡು " ಎಂದು ಅಂಗಲಾಚಿದಳು.

ಗೋಪಾಲನು ತನ್ನ ಮಗ್ಗುಲಲ್ಲಿ, ಕಂಠವನ್ನು ಆಲಿಂಗಿಸಿಕೊಂಡು ನಿಂತಿರುವ ಸುಂದರಾಕೃತಿಯನ್ನು ಸಮಯೋಚಿತವಾಗಿ ಆರಾಧಿಸಿ, "ನೀಲಾ! ನೀನು ನನಗೆ ಬೇಡವೆಂಬ ಭಾವವನ್ನು ಯಾವ ಪಿಶಾಚಿಯು ನಿನ್ನ ಹೃದಯದಲ್ಲಿ ಬಿತ್ತಿತು? ಈ ವಿಸ್ತಾರಪ್ರಪಂಚದಲ್ಲಿ ನಾನು ಮತ್ತೆ ಮತ್ತೆ ಅಪೇಕ್ಷಿಸಿ ಆಶಿಸಿರುವ ಹೆಣ್ಣು ಎಂದರೆ ನೀನು. ಮತ್ತೆ ಯಾರೂ ನನ್ನ ಮೇಲೆ ತಮ್ಮ ಪ್ರಭಾವವನ್ನು ಬೀರಿಲ್ಲವೆಂಬುದು ನೀನರಿಯದ ಮಾತೇ? ನಾನಿಂದೂ ಇನ್ನೂ ಬೇಟೆಗಾರನಂತೆ ಅಲೆಯುತ್ತಿದ್ದೇನೆ. ನನಗೆ ಇಂದು ಬೇಟೆಗಳನ್ನು ಹೊಡೆಯುವುದರಲ್ಲಿ ಮಾತ್ರ ತೃಪ್ತಿ. ಇನ್ನೂ ನಾನು ಒಂದು ಕಡೆ ಸಮಾಧಾನದಿಂದ ಕುಳಿತುಕೊಳ್ಳುವ ಸ್ಥಿತಿಗೆ ಬಂದಿಲ್ಲ. ಸ್ಪಷ್ಟವಾಗಿ ಹೇಳುವೆನೆಂದು ಮನಸ್ಸಿನಲ್ಲಿ ಆಯಾಸಪಡಬೇಡ. ನೀಲಾ! ನನಗೆ ನೀನು ಬೇಕು ನಿಜ! ಆದರೆ ನನ್ನ ಆಶೆಯು ಸಮುದ್ರದಂತೆ ಅಪಾರವಾದುದು. ಯಾವ ಹೆಣ್ಣನ್ನು ಹೇಗೆ ಕಂಡರೂ ನನ್ನ ಕಣ್ಣಿಗೆ ಅಲ್ಲಿ ಒಂದು ಚೆಲುವು ಕಂಡು, ಆ ಚೆಲುವನ್ನು ಆರಾಧಿಸಿಯೇ ತೀರಬೇಕೆಂಬ ದುರಂತ ದುರ್ದಾಂತ ಚಾಪಲ್ಯವೊಂದು ಹುಟ್ಟುತ್ತದೆ. ಆ ಚಾಪಲ್ಯವು ನಿವಾರಣೆಯಾಗುವವರೆಗೂ ನನಗೆ ಬೇರೊಂದೂ ಬೇಕಾಗುವುದಿಲ್ಲ. ಹೀಗೆ, ಹೊತ್ತು ಹೊತ್ತಿಗೆ ಹೊಸ ಶೃಂಗಾರವನ್ನು ಹುಡುಕಿಕೊಂಡು ಅಲೆಯುತ್ತಿದ್ದೇನೆ. ನನ್ನ ಶೃಂಗಾರ ವಿಹಾರಗಳಲ್ಲಿ ನನಗೊಂದು ಅಮೂಲ್ಯವಾದ ರತ್ನವು ಸಿಕ್ಕಿದೆ ಎಂಬುದೂ ಇಲ್ಲಿಗೆ ಗೊತ್ತಿದೆ ನೀಲಾ! ಆದರೆ, ಮನಸ್ಸಿನ ಆಶೆಯು ಮಳೆಗಾಲದ ನದಿಯಂತೆ ತುಂಬಿ ಓಡುತ್ತಿದೆಯೆಂಬುದನ್ನು ಗಮನಿಸು. ನೀನು ಏನು ಹೇಳುವೆಯೆಂಬುದನ್ನೂ ಬಲ್ಲೆ. ಒಲಿದ ಹೆಂಗುಸೆಂದರೆ, ಸ್ವರ್ಗದ ಒಂದು ತುಂಡನ್ನು ನಿಂತಲ್ಲಿಗೆ ತಂದುಕೊಡುವ ಚಿಂತಾಮಣಿಯೆಂಬುದೂ ನನಗೆ ಗೊತ್ತಿದೆ ಆದರೆ, ಇನ್ನೆರಡು ದಿನ ಸಮಾಧಾನವಾಗಿರು. ರಕ್ತದ ಹುಳಿಯು ಹೆಚ್ಚಿ

ಹಿಡಿದಿರುವ ಹುಚ್ಚು ಕೊಂಚ ಇಳಿಯಲಿ. ಗೋಪಾಲನು ನಿನ್ನ ದಾಸಾನು ದಾಸನಾಗಿ, ನಿನ್ನನ್ನು ಏಕಪತ್ನಿಯಂತೆ ಆರಾಧಿಸಿಕೊಂಡು, ಸಂಪೂರ್ಣ ವಾಗಿ ನಿನ್ನವನಾಗುವನು. ಈಗ ನಾನು 'ನೀನೂ ಬೇಕು' ಎಂಬ ಘಟ್ಟದಲ್ಲಿ ದ್ದೇನೆ. 'ನೀನಾದರೆ ಸಾಕು' ಎಂಬ ಘಟ್ಟಕ್ಕೆ ಇನ್ನೂ ಬಂದಿಲ್ಲ, ಅಳದಿರು. ನೀರು ಕರೆದು, ಕರೆದು ಈ ಕಣ್ಣು ಚೆಲುವುಗೆಡುವುದನ್ನು ನಾನು ಸೈರಿಸಲಾರೆ. ನೀನು ಪ್ರೌಢೆ, ವಿದ್ಯಾವಂತೆ, ತಿಳಿದವಳು ಎಂದು, ಮನಸ್ಸನ್ನು ಬಿಚ್ಚಿ ಮುಂದರಿಸಿದರೆ, ನೀನು ಎಳೆಯ ಹುಡುಗಿಯಂತೆ ಶೋಕಿಸುವುದೆ? ಇದು ಸರಿ. ನಕ್ಕುಬಿಡು. ಮನಸ್ಸಿನ ಭಾರವನ್ನು ನಗುವಿನ ಲಹರಿಯಲ್ಲಿ ಹರಿಯ ಬಿಟ್ಟು ನಿಸ್ಪೃಹಕವಾದ ಮನಸ್ಸಿನಿಂದ ಎರಡು ಮಾತಾಡಿ ನಕ್ಕು ನಗಿಸು. ಚಿಂತಿಸದಿರು! ನೀನು ನಾನಿಲ್ಲದಿದ್ದರೆ, ನೀನು ದೇವರಿಲ್ಲದ ಗುಡಿಯಾಗುವೆ ಯೆಂದೆ, ಕೊಂಚತಡೆ! ಇನ್ನೆರಡು ದಿನ ಕಳೆಯಲಿ. ನಾನಾಗಿ ಬಂದು ಈ ದೇವಿಯನ್ನು ಈ ಸ್ವರ್ಗದ ಅಪ್ಸರೆಯನ್ನು, ಉರ್ವಶಿಯನ್ನು ಪುರೂರವನು ಆರಾಧಿಸಿದಂತೆ, ನನ್ನ ಸರ್ವಸ್ವದಿಂದಲೂ ಆರಾಧಿಸುವೆನು." ಎಂದು ಸಣ್ಣ ಮಾತಿನಲ್ಲಿ, ಅರ್ಥಾರ್ಥನಿಜವಾದ ಮೋಹದ ಸುಂದರವಾಣಿಯಲ್ಲಿ ಕಿವಿಯಲ್ಲಿ ಹೇಳಿದನು.

ಭಾವ ಭಂಗಿ ಸಹಿತವಾಗಿ ಮುದ್ರಾಯುಕ್ತವಾಗಿ ಆಡಿದ ಮಾತು ಹೆಣ್ಣಿನ ಹೃದಯವನ್ನು ಸಂಗ್ರಹಿಸಿತು. ಆಕೆಯು ಬಂದಾಗ ಒಂದು ಖಂಡುಗದಷ್ಟು ಹೇಳುವೆನೆಂದುಕೊಂಡು ಬಂದಿದ್ದವಳು ಒಂದು ಮಾತೂ ಆಡಲಾರದೆ ಹೋದಳು. ಹೃದಯದ ಆಶೆಗೆ ಬಾಯಿಕೊಟ್ಟು ನುಡಿಸಿ ಅವನನ್ನು ಒಲಿಸಿ ಕರೆದು ತರುವೆನೆಂದು ಬಂದವಳು ಇಂದು ಹೃದಯವನ್ನು ಅವನಲ್ಲಿಟ್ಟು ಆಶೆಯನ್ನು ಅಟ್ಟದಮೇಲಿಟ್ಟು ಏನು ನುಡಿಯಲೂ ಬಾಯಿ ಕಾಣದೆ ಮುಗ್ಧಳಂತೆ ನಿಂತುಬಿಟ್ಟಳು. ಅವನ ಮಾತಿನ ವೈಖರಿಯಲ್ಲಿ ಆಕೆಯನ್ನು ಮೆಚ್ಚಿಸುವ ಶಕ್ತಿಯಿತ್ತು. ಹೃದಯವನ್ನು ನಂಬಿಸುವ ಸಾಮರ್ಥ್ಯವಿತ್ತು. ಬಾಯಿಕಟ್ಟುವಂತಹ ಪ್ರಭಾವವಿತ್ತು. ಒಲಿದ ಹೆಣ್ಣು. ಸಲುವಿನ ನುಡಿಗೆ ಸೋಲುವುದರಲ್ಲಿ ಸೋಜಿಗವೇನು?

ಸೋತುನಿಂತಿರುವ ಸಲ್ಲೆಯನ್ನು ಗೋಪಾಲನು ಮತ್ತೆ ಮೋಹದ ಆವೇಶದಿಂದ ನುಡಿಸಿದನು.. “ದೇವಿಯವರು ಅನುಗ್ರಹಮಾಡಿ ಇಲ್ಲಿಯ ವರೆಗೂ ದಯಮಾಡಿಸಿದುದು ಪಾಮರನ ಭಾಗ್ಯ! ಆ ಭಾಗ್ಯವಿನ್ನೂ ಮುಂದುವರೆದು, ನನಗೆ ಒಂದು ವರವನ್ನು ಸಂಪಾದಿಸಿಕೊಡಲಾರದೆ? ಈ ಹಕ್ಕಿಯು ತಮ್ಮ ಪಂಜರವನ್ನು ಸೇರಿ ಕೃತಾರ್ಥವಾಗುವುದಕ್ಕೆ ಇನ್ನೂ ಕಾಲವಿದೆ. ಅದುವರೆಗೆ, ತಾವಾಗಿ ಆಗಾಗ ಬಂದು ನನ್ನನ್ನು ಸುಖಿಯನ್ನಾಗಿ ಮಾಡುವುದಿಲ್ಲವೇ? ಎಲ್ಲಿ ಹಾಗೆಂದು ನನಗೆ ಅಭಿವಚನವನ್ನು ಕೊಡೋಣವಾಗಲಿ,” ಎಂದನು. ಇಬ್ಬರ ಕುರುಳೂ ಒಂದನ್ನೊಂದು ಒತ್ತುತ್ತಿವೆ. ಅವನ ಉಸುರಿನ ಬಿಸಿಯು ಅವಳ ಮೂಗಿನ ಕೊನೆಗೆ ಅನುಭವವಾಗುತ್ತಿದೆ. ಅವನ ಕೈಗಳು ಅವಳ ಭುಜವನ್ನು ಭದ್ರವಾಗಿದ್ದರೂ ಲಲಿತವಾಗಿ ಮೃದುವಾಗಿ ಹಿಡಿದುಕೊಂಡು ಈ ದೇಹದಲ್ಲಿ ತುಂಬಿರುವ ಮೋಹಭಾವದ ಪರಿಚಯವನ್ನು ಆ ದೇಹಕ್ಕೂ ಮಾಡಿಕೊಡುತ್ತಿವೆ. ಇನ್ನೆಂತು ಅವಳು ಇಲ್ಲವೆಂದಾಳು? ಹಾಗೆಯೇ ಅವನೆದೆಯ ಮೇಲೆ ಸುಖವಾಗಿ ಒರಗಿಕೊಂಡು, ‘ಗೋಪಾಲ’ ನಾನು ಆಣೆಯಿಡಬೇಕಾಗಿಲ್ಲ. ನಮ್ಮಿಬ್ಬರನ್ನೂ ಸೃಷ್ಟಿಸಿದಂದೇ ವಿಧಿಯು ನನ್ನನ್ನು ನಿನಗೆ ಮೀಸಲು ಮಾಡಿತು. ಅಯ್ಯೋ! ಹಾಗೆಯೇ ಅದೂ ನಿನ್ನನ್ನೂ ನನಗೆಂದೇ ಮೀಸಲು ಮಾಡಿದ್ದರೆ! ಹುಂ! ಆಗಲಿ. ಕಾಯುವೆನು. ಗೋಪಾಲ! ನಿನ್ನ ಸುಂದರ ಮೂರ್ತಿಯನ್ನು ನನ್ನ ಹೃದಯಮಂದಿರದಲ್ಲಿಟ್ಟು ಈ ಮೂರ್ತಿಗೆ ಮಾಡಬೇಕೆಂದಿರುವ ಪೂಜೆಯನ್ನು ಆ ಮೂರ್ತಿಗೆ ಸಲ್ಲಿಸುವೆನು. ನನ್ನ ಪ್ರೇಮವು ನಿಜವಾದರೆ, ನಾನು ಆಡಿದುದು ಸತ್ಯವಾದರೆ, ನೀನು ನನ್ನವನಾಗುವೆ. ಈ ಜನ್ಮದಲ್ಲಿ ನಾನು ಒಮ್ಮೆಯಾದರೂ ಒಂದು ಕ್ಷಣವಾದರೂ ಗೋಪಾಲನು ನನ್ನವನು ಎಂದು ತೃಪ್ತಿಪಟ್ಟು ಸಾಯುವೆನು.” ಎಂದಳು.

ಗೋಪಾಲನಿಗೆ ಆ ಮಾತು ಬಹಳ ಮೆಚ್ಚಿಕೆಯಾಯಿತು. ಆದರೂ ಆ ದೃಢವಿಶ್ವಾಸದಲ್ಲಿ ಬೆರೆತು ಹೋಗಲಾರದೆ ಸಿಡಿದುನಿಂತು, “ಹೆಣ್ಣೇ! ಯೋಚಿಸಿನೋಡು. ನನ್ನವನು ಎಂತಹ ಧೀರ! ಇವನ ಮುಂದೆ ಸೋಲದ

ಹೆಣ್ಣಿಲ್ಲ.'' ಎಂದು ಹೆಮ್ಮೆಪಡು. ''ನೀನೊಲಿದುದನ್ನು ಇತರರೂ ಅಷ್ಟು ಸವಿಯಲೆನ್ನು'' ಎಂದನು. ನೀಲಳು ನಕ್ಕಳು. ನಗುವಿನಲ್ಲಿ ಅಸಮಾಧಾನ ರೋಷಗಳಿರಲಿಲ್ಲ. ದೈನ್ಯವಿರಲಿಲ್ಲ, ಸಂತೋಷವೂ ಇರಲಿಲ್ಲ. ಎಲ್ಲದರ ಅಭಾವನೇ ಒಂದು ಭಾವವಾದರೆ ಅದಷ್ಟು ಇತ್ತು. ಅವಳು ಮತ್ತೆ ಕೋಮಲಬಾಹುಗಳಿಂದ ಅವನನ್ನು ಬರಸೆಳೆದು ಮೈಗೆ ಮೈಯ್ಯೊತ್ತುತ್ತಾ ಹಿಡಿದುಕೊಂಡು, ''ನನಗೆ ಗೆಲುವಿನ ಹೆಮ್ಮೆ ಬೇಡಪ್ಪಾ! ನಾನೂ ಹಿಂದೆ ಗೆದ್ದೆನೆಂದು ಬೇಕಾದಷ್ಟು ಹಿಗ್ಗಿ ವೈಯ್ಯಾರ ಮಾಡಿದ್ದೇನೆ. ಇಂದು ನಾನು ಸೋತಿದ್ದೇನೆ. ಸೋಲಿನಲ್ಲಿರುವ ಸೌಖ್ಯವನ್ನು ಕಂಡು ಹಿಗ್ಗಿದ್ದೇನೆ. ಸೋತಿದ್ದರೂ ಸಾಯಲಾರದೆ, ಸಾವಿನಂತಹ ನೋವಿನಿಂದುಳಿಸು ಎಂದು ನಿನ್ನ ಬಳಿಗೆ ಬಂದಿದ್ದೇನೆ. ಆಗಲಿ. ನನ್ನ ದೇವರು ನನಗೆ ಒಲಿಯಿತು. ನನ್ನ ಅದೃಷ್ಟವು ಪಕ್ವವಾಗಿ, ನನ್ನ ಭಾಗ್ಯದೇವತೆಯು ಒಲಿದಂದು, ನೀನೂ ನನ್ನ ಮನೆಗೆ ಬಂದು ನನ್ನ ಪೂಜೆಯನ್ನು ಕೈಗೊಳ್ಳುವೆ, ಆಗಲಿ. ಅದುವರೆಗೆ ನಾನೇ ಬರುವೆನು.'' ಎಂದು ಆಣೆಯನ್ನು ಮಾಡಿಕೊಟ್ಟಳು. . . . .

* * * *

ಸುಮಾರು ನಾಲ್ಕು ಗಂಟೆಯಿರಬಹುದು. ಹನುಮಂತರಾಯರು ಬಂದರು. ಎಂದೂ ಅವರು ಹಸನ್ಮುಖಿಗಳು. ಕೈಕೆಳಗೆ ಸುಮಾರು ಹತ್ತು ಸಾವಿರ ಜನರು ಕೆಲಸ ಮಾಡುತ್ತಾರೆ. ಒಬ್ಬರ ಮೇಲೂ ಯಾವೊತ್ತೂ ಕೋಪ ಮಾಡಿದವರಲ್ಲ. ನಾಲ್ಕು ಮಿಲ್ಲುಗಳ ಆಡಳಿತವನ್ನು ನಿರ್ವಹಿಸುವ ಕರ್ತೃತ್ವಶಾಲಿಯೆಂದು ಹೊಗಳಿಸಿಕೊಂಡಿದ್ದರೂ ನಿಷ್ಠುರವಾಕ್ಕಿನಿಂದ ನೋಯಿಸುವವನು ಎಂಬ ಅಪಖ್ಯಾತಿಯನ್ನು ಪಡೆದವನಲ್ಲ. ಸೌಮ್ಯನಾಗಿ ಶಾಂತನಾಗಿ ಸರಸಿಯಾಗಿ ಗೆಲ್ಲುವಮಾತಿನ ಹನುಮಂತರಾಯರ ಮುಖದಲ್ಲಿಂದು ಅಸಮಾಧಾನವೆಂದು ಮನೆಮಾಡಿದೆ. ಏಕೋ ಏನೋ ಬಿರುಸಾಗಿ ಮಾತನಾಡಿ ಮುಗಿಸಿ ಹೊರಟು ಹೋಗೋಣವೆಂಬ ಭಾವವು ಬಲಿತು ಮೂರ್ತಿಗೊಂಡಿದೆ. ಒಟ್ಟಾರೆ ಹೇಳಬೇಕೆಂದರೆ ಇಂದಿನ ಹನುಮಂತರಾಯರು ಎಂದಿನ ಹನುಮಂತರಾಯರಲ್ಲ.

ಸ್ವಾಮಿಯು ಎಂದಿನಂತೆ ನಗುನಗುತ್ತಾ ಬಂದರೂ ಅವರ ಮುಖ ವನ್ನು ಕಂಡು ಬೆಚ್ಚಿ "ಇದೇನು?" ಎಂದುಕೊಂಡನು. "ಏನೋ ಪ್ರಬಲ ವಾಗಿರಬೇಕು. ಇರಲಿ." ಎಂದುಕೊಂಡು ಅವರನ್ನು ಸತ್ಕರಿಸಿದನು.

ಒಂದು ಗಳಿಗೆ ಇಬ್ಬರೂ ಮಾತನಾಡಲಿಲ್ಲ. ಮುಸೆಯುತ್ತಿರುವ ಮೋಡ ದಂತೆ ರಾಯರು. ಏನೋ ಸಿಡಿಲು ಬರುವಂತಿದೆ, ಬಂದೇಬಿಡಲಿ ನೋಡಿಯೇ ಬಿಡೋಣ ಎಂದು ಸಿದ್ಧರಾಗಿರುವ ಮನಸ್ಸಿನಲ್ಲಿ ಸ್ವಾಮಿ. ಕೊನೆಗೆ ರಾಯರೇ ಮಾತನಾಡಿದರು. "ನಾನು ಇಲ್ಲಿಗೆ ಕೆಲಸಕ್ಕೆ ಬಂದು ಮೂವತ್ತೈದು ವರ್ಷವಾಯಿತು."

"ಹೂ"

"ಯಜಮಾನರು ನನ್ನಲ್ಲಿ ಸಂಪೂರ್ಣವಾಗಿ ವಿಶ್ವಾಸವಿಟ್ಟಿದ್ದರು."

"ಹೂ"

"ಅವರು ಸ್ವರ್ಗವಾಸಿಗಳಾಗಿ ಐದು ವರ್ಷವಾಯಿತು."

"ಹೂ"

"ಅಂದಿನಿಂದಲೂ ತಾವು ಬದಲಾಯಿಸಿದ್ದೀರಿ"

"ಹೂ"

"ತಮ್ಮ ತಂದೆಯವರು ಬಹು ಆಯಾಸಪಟ್ಟು ಸಂಪಾದಿಸಿದರು. ತಾವು... ಅಷ್ಟೇ ಅನಾಯಾಸವಾಗಿ ದುಂದು ಮಾಡುತ್ತಿದ್ದೀರಿ"

"ಹೂ"

"ಈ ಮಾತನ್ನು ತಮಗೆ ಹೇಳಬೇಕೆಂದು ಮೂರು ವರ್ಷಗಳಿಂದ ಕಾದಿದ್ದೇನೆ."

"ಹೂ"

"ಇವೊತ್ತು ಹೇಳಿಯೇ ತೀರಬೇಕು ಎನ್ನಿಸಿತು. ಬಂದಿದ್ದೇನೆ."

"ಸರಿ. ಹೇಳಿಬಿಡಿ."

ಹೂ, ಹೂಂ ಎಂದು ಒಂದೊಂದು ಅಕ್ಷರದಲ್ಲಿದ್ದ ಮಾತು ಕೊಂಚ ಬೆಳೆದ ಮೇಲೆ ರಾಯರ ಮಾತೂ ಬೆಳೆಯಿತು. ರಾಯರು ಇನ್ನೂ ದಿಟ್ಟವಾಗಿ

ಕುಳಿತು, ನುಡಿದರು " ಯಜಮಾನರು ಹತ್ತು ಸಾವಿರದ ಬಂಡವಾಳದಿಂದ ಆರಂಭಿಸಿ ಅದನ್ನು ಒಂದು ಕೋಟಿ ರೂಪಾಯಿಯ ಆಸ್ತಿ ಮಾಡಿಟ್ಟರು. ಅವರ ಅದೃಷ್ಟ ಭಾರಿ. ಅದೃಷ್ಟ ಲಕ್ಷ್ಮಿಯು ಒಲಿದುದರ ಜೊತೆಗೆ ಅವರೂ ದುಡಿದರು: ದುಂದು ಖರ್ಚಿನ ಕಡೆಗೇ ಮನಸ್ಸು ಬಿಡದೆ ತಡೆದರು. ಆಸ್ತಿ ಯಾಯಿತು.

" ಹೂ "

" ಈಗ ತಮ್ಮ ದಿವಸದಲ್ಲಿ ಆ ಆಸ್ತಿಯು ಏನಾಗುವುದೋ ಎಂಬ ದಿಗಿಲು ನಮಗೆ ತಾನೇ ತಾನಾಗಿದೆ. ನಾವು ತಮ್ಮ ಉಪ್ಪು ತಿಂದು ಬೆಳೆದ ವರು. ನಮಗೆ ಆ ದಿಗಿಲಾದರೂ ತಪ್ಪಬೇಕು. ಅಥವಾ, . . . . "

" ಹೂ. . ಅಥವಾ. . "

" ಅಥವಾ. . . ಅಥವಾ. . . . ಈ ದುರ್ದಿನಗಳನ್ನು ನೋಡಿ ಸೈರಿಸದ ಈ ಸ್ವಾಮಿಭಕ್ತರು ದೇಶಾಂತರ ಹೋಗುವುದಕ್ಕಾದರೂ ಅಪ್ಪಣೆಯಾಗ ಬೇಕು "

ಸ್ವಾಮಿಯು ಕೊಂಚ ಹೊತ್ತು ಸುಮ್ಮನಿದ್ದನು. ತಟ್ಟನೆ ತಿರುಗಿ ತಮ್ಮೆದುರು ಇದುವರೆಗೆ ನಾನು ಸಿಗರೇಟು ಕೂಡ ಸೇದಿಲ್ಲ. " ಎಂದನು.

ರಾಯರಿಗೆ ಅದು ಮನಸ್ಸಿಗೆ ಹಿಡಿದು, " ಹೌದು " ಎಂದರು.

" ಮಿಲ್ಲುಗಳ ಆಡಳಿತವೆಲ್ಲ ತಮ್ಮದು. "

" ಹೌದು. "

" ಮಿಲ್ಲುಗಳಿಂದ ಹೋದ ಸಲ ಬಂದಿರುವ ಆದಾಯವು ಆರು ಲಕ್ಷ "

" ಹೌದು. "

" ಹೋದ ಸಲದ ನನ್ನ ಖರ್ಚು ಐದು ಲಕ್ಷ ಮಾತ್ರ "

" ಸರಿ. "

" ಅದರಲ್ಲಿ ಮನೆಯ ಒಂದು ಲಕ್ಷದ ಖರ್ಚು ಸೇರಿದೆ. ಹೆಣ್ಣು ಮಕ್ಕಳ ಬಳುವಳಿ ಮುಂತಾದ ಯಾವುದೂ ಕಡಿಮೆಯಾಗಿಲ್ಲ. "

" ಸರಿ. "

" ಇನ್ನು ಆಸ್ತಿಯು ಕರಗುವುದು ಎಂದರೇನು ? ದುರ್ದಿನಗಳೇಕೆ ? "

ರಾಯರು ಏನೂ ಹೇಳಲಾರದೆ ಹೋದರು : ಆದರೂ ಅವರ ಮನಸ್ಸಿನ ಬಿಗುಹು ಮಾತ್ರ ಸಡಿಲವಾಗಲಿಲ್ಲ. " ಸ್ವಾಮಿ ! ತಾವು ಹೀಗೆ ಲೆಕ್ಕ ಹೇಳಿ ಬಾಯಿ ಕಟ್ಟಿಸುವಿರೆಂದು ನಾನು ನಂಬಿರಲಿಲ್ಲ. ಆದರೂ, ಜನರ ಭಾವನೆಯು ಹೀಗೆ ಆಗಿಹೋಗಿದೆ. ನಾನೂ ತಾವು ಲೆಕ್ಕ ಹೇಳುವವರೆಗೆ ಏನೋ ಅನಾಹುತವಾಗಿದೆಯೆಂದೇ ಗಾಬರಿ ಬಿದ್ದಿದ್ದೆ. ತಾವು ಎಳೆಯ ಮಗುವಾಗಿದ್ದಿನಿಂದಲೂ ಎತ್ತಿ ಬೆಳಸಿದ ಅಭಿಮಾನದಿಂದ ದುಡುಕಿ ನಾನು ಒಂದು ಮಾತು ಹೇಳಿದರೆ ತಮಗೆ ಕೋಪ ಬರುವದಿಲ್ಲವಷ್ಟೆ ? " ಎಂದರು.

" ತಾವು ಹೇಳಬೇಕೆಂದಿರುವ ಮಾತು ಎಷ್ಟೇ ಕಠಿಣವಾಗಿದ್ದರೂ ಸರಿ. ಹೇಳಿ ಚಿಂತೆಯಿಲ್ಲ. ನಮಗೆ ಬೇಕಾದವರು ಮಾತನಾಡಿದರೆ ಬರುವ ಕೋಪಕ್ಕಿಂತಲೂ ಆಡಬೇಕೆಂದಿರುವ ಮಾತು ಆಡದಿದ್ದರೆ ಬರುವ ಕೋಪವೇ ಹೆಚ್ಚು ಅಲ್ಲವೆ ? "

" ಸರಿ. ಫಲವೇನಾದರೂ ಆಗಲಿ. ಆಡಿಬಿಡುತ್ತೇನೆ. ತಾವು ತಮ್ಮ ಲೆಕ್ಕದ ಪ್ರಕಾರವಾಗಿ ಕಳೆದ ವರ್ಷ ನಾಲ್ಕು ಲಕ್ಷ ಖರ್ಚು ಮಾಡಿದ್ದೀರಿ. ನಮ್ಮ ದೇಶದಲ್ಲಿ ನಾಲ್ಕು ನೂರು ರೂಪಾಯಿ ಕೂಡ ಆಸ್ತಿಯಿಲ್ಲದವರು ಎಷ್ಟು ಲಕ್ಷ ಮಂದಿಯಿದ್ದಾರೆ ಬಲ್ಲಿರಾ ? "

" ರಾಯರೇ ! ನಾನು ಬಲ್ಲೆ. ಅದಕ್ಕಾಗಿಯೇ ನಾನು ಹೀಗೆ ಖರ್ಚು ಮಾಡುತ್ತಿದ್ದೇನೆ. ತಾವು ತಮ್ಮ ತಂದೆಯ ಬಲಗೈಯಾಗಿ ಸಂಪಾದಿಸಿದ ಹಣ. ಅಂತಹ ಹಣವನ್ನು ನಾನು ಲಕ್ಷ್ಯವಿಲ್ಲದೆ ಕಳೆಯುತ್ತಿದ್ದೇನೆಂದು ತಾವು ಭಾವಿಸಿದ್ದೀರಿ. ನಾನು ತಂದೆಯವರ ಸಂಪ್ರದಾಯವನ್ನು ಎಳ್ಳಷ್ಟು ಬಿಡದೆ ಕಾಪಾಡಿಕೊಂಡಿದ್ದೇನೆ. ತಂದೆಯವರು ತಮ್ಮಲ್ಲಿ ಮೊದಲು ಹಣವಿರಲಿಲ್ಲವೆಂದು ತಮ್ಮ ಮನಸ್ಸಿನ ಮುಂದೆ " ಹಣ " ವೆಂಬುದನ್ನಷ್ಟೇ ಲಕ್ಷ್ಯವಾಗಿಟ್ಟುಕೊಂಡು ತಮ್ಮ ಬುದ್ಧಿಯೆಂಬ ಪಣವನ್ನು ಒಡ್ಡಿ ಅದನ್ನು ಸಂಪಾದಿಸಿದರು.

ನಾನಿಂದು ಅವರು ಬಿಟ್ಟುಹೋಗಿರುವ ಹಣವನ್ನು ಕೊಟ್ಟು ನನ್ನಲ್ಲಿ

ಇಲ್ಲದ ಸೌಖ್ಯವನ್ನು ಸಂಪಾದಿಸಿಕೊಳ್ಳುತ್ತಿದ್ದೇನೆ, ಇಲ್ಲದಾಗಲಂತೂ ಕೈಮುಗಿದು ಕುಳಿತುಕೊಳ್ಳಬೇಕು, ನಿಜ! ದೇವರು ಕೊಟ್ಟಿರುವಾಗಲೂ ಸುಮ್ಮನೇಕಿರಬೇಕು? ಇಂದು ನನಗೆ ಇದೆ. ನಾನು ಹೋದ ಹೋದಲ್ಲಿ ನನಗೆ ಬೇಕಾದ ಸೌಖ್ಯವನ್ನು ಕೊಂಡುಕೊಳ್ಳುತ್ತಿದ್ದೇನೆ. ನನಗೆ ಬಂದಿರುವ ಈ ಪಿತ್ರಾರ್ಜಿತವಾದ ಅಪಾರ ಆಸ್ತಿಯಲ್ಲಿ ನಾನು ಅನುಭವಿಸಿದಷ್ಟು ಮಾತ್ರ ನನ್ನದು ಎಂದು ತಿಳಿದುಕೊಂಡಿದ್ದೇನೆ. ಅದಕ್ಕಾಗಿ ತಾವು ವ್ಯಥಿಸ ಬೇಡಿ. ಇರಲಿ. ಇನ್ನೂ ಕೆಲವು ವರ್ಷವಾದರೂ ನನ್ನ ಹುಚ್ಚು ನಡೆದು ಹೋಗಲಿ. ಈ ಹುಚ್ಚು ಈ ಹಂಬಲ ತೀರಿದ ಮೇಲೆ ನಾನೂ ಒಬ್ಬ ಸಜ್ಜನ ನಾಗಲು ಪ್ರಯತ್ನಿಸುವೆನು. ಹಣವೆಲ್ಲ ಪೋಲಾಯಿತು ಎಂದಿರಲ್ಲವೆ? ಇಲ್ಲ, ನಾನು ಹಣವನ್ನು ಹಂಚುತ್ತಿರುವೆನು. ನಾನು ಮಾಡುವ ಕಾರ್ಯಗಳು ತಮ್ಮ ಕಣ್ಣಿನಲ್ಲಿ ದುಷ್ಟವಾದರೂ, ಎಷ್ಟು ಸಂಸಾರಗಳಿಗೆ ಅನುಕೂಲವಾಗಿವೆ ಬಲ್ಲಿರಾ? ಸೌಜನ್ಯವೆಂಬ ಹೆಸರಿನಲ್ಲಿ ಅನುಭವಿಸುತ್ತಿದ್ದ ದಾರಿದ್ರ್ಯವನ್ನು ಒಂದು ಹೆಜ್ಜೆಯಷ್ಟಾದರೂ ಹಿಂದೆ ಸರಿಸಿ, ಈ ಲೋಕದಲ್ಲಿಯೂ ಸೌಖ್ಯ ವುಂಟು ಎಂಬ ಭಾವನೆಯು ಒಮ್ಮೆಯಾದರೂ ಆ ಕುಟುಂಬಕ್ಕೆ ಬರುವದಕ್ಕೆ ಏನೇನು ಬೇಕೋ ಅದಷ್ಟನ್ನೂ ಮಾಡಿದ್ದೇನೆ, ಕೊನೆಯದಾಗಿ ಲೋಕಾಭಿ ಪ್ರಾಯದ ಮಾತೆತ್ತಿದಿರಿ. ಲೋಕಾಭಿಪ್ರಾಯವು ಗಾಡಿಗೆ ಕಟ್ಟಿದ ಎತ್ತಿನ ಹಾಗೆ ತಿರುಗಿಸಿದ ಕಡೆ ಹೋಗುವುದು ಎಂಬುದನ್ನು ಕಾಣಿರಾ ತಾವು? ತಾವೂ ತಂದೆಯವರೂ ಸಂಪಾದಿಸಿದ ಆಸ್ತಿಯನ್ನು ನಾನು ಸದ್ವಿನಿಯೋಗ ಮಾಡುತ್ತಿದ್ದೇನೆಯೆಂಬ ನಂಬಿಕೆಯು ನನಗಿದೆ. ಲೋಕವು ಆ ನಂಬಿಕೆ ಯನ್ನು ಒಪ್ಪಿಕೊಂಡು ನನ್ನನ್ನು ತಮ್ಮ ಕಣ್ಣಮುಂದೆ ಹೊಗಳುವಂತೆ ಮಾಡುವ ಸಾಧನವಿದೋ! ಇಂದೊಂದು ಲಕ್ಷ ರೂಪಾಯಿ ತೆಗೆದು ಕೊಂಡು ಹೋಗಿ ತಮಗೆ ತೋರಿದ ಧರ್ಮಕಾರ್ಯವೊಂದನ್ನು ತಂದೆಯು ವರ ಹೆಸರಿನಲ್ಲಿ ಮಾಡಿ. ನಾಳೆಯ ದಿನ ಬೆಳಿಗ್ಗೆ ಹೀಗೆ ಮಾಡಬೇಕೆಂದಿರು ವೆನು ಎಂದು ಯಾರಿಗಾದರೂ ತಿಳಿಸಿ. ಸಂಜೆಯೊಳಗಾಗಿ ಎಲ್ಲೆಲ್ಲೂ ಪ್ರಸಿದ್ಧಿ ಯಾಗಿ ಹೋಗಿ, ಒಂದೇ ದಿನದೊಳಗಾಗಿ ಗೋಪಾಲಸ್ವಾಮಿಯ ಪಟಿಂಗ

ತನವೆಲ್ಲ ಮಾಯವಾಗಿ ಅವನು ದಾನ ಕರ್ಣನಾಗುವನು. ” ಎಂದು ಹೇಳಿ ಒಂದು ಲಕ್ಷ ರೂಪಾಯಿನ ಒಂದು ಚೆಕ್ಕು ಬರೆದು ಹನುಮಂತರಾಯರ ಕೈಯಲ್ಲಿ ಕೊಟ್ಟನು.

ಅವರಿಗೆ ಅವನನ್ನು ಕಂಡು ಗೌರವ ತಿರಸ್ಕಾರಗಳೆರಡೂ ಏಕಕಾಲದಲ್ಲಿ ತೋರಿದುವು. ಹಿಂದೊಮ್ಮೆ ಯಾವುದೋ ಒಂದು ಹಿರಿಯ ಲಾಭ ಸಿಕ್ಕುವ ಸಂದರ್ಭದಲ್ಲಿ ತಾನು ನ್ಯಾಯಾನ್ಯಾಯವನ್ನು ಕುರಿತು ಮಾತನಾಡಿ ಹಿಂತೆಗೆದಾಗ ಇವರ ತಂದೆಯೂ ಇದೇ ರೀತಿ ಹೇಳಿದ್ದುದು ನೆನಪಾಯಿತು. ಅವರು ಇತರರಿಗಾಗಿ ದಾನಗೀನ ಮಾಡುವುದರಲ್ಲಿ ಅಷ್ಟು ನಂಬಿಕೆಯಿಲ್ಲದವರಾದರೂ, ಏನೋ ಎಂತೋ ಆ ಚೆಕ್ಕು ತೆಗೆದಿಟ್ಟುಕೊಂಡರು. ಇನ್ನೊಂದು ಗಳಿಗೆ ಮಾತನಾಡಿ “ ಆ ಹಣದಲ್ಲಿ ಒಂದು ಒಳ್ಳೆಯ ಅನಾಥಾಲಯವನ್ನು ಮಾಡಬೇಕು ” ಎಂದು ಗೊತ್ತುಮಾಡಿಕೊಂಡು ಅಲ್ಲಿಂದ ಹೊರಟರು. ಅವರ ಮನಸ್ಸು ಮಾತ್ರ ಸ್ವಾಮಿಯ ಸಿದ್ಧಾಂತವನ್ನು ಒಪ್ಪಲಿಲ್ಲ : ಅವರ ಬುದ್ಧಿಯು ಆ ವಾಗ್ಧೋರಣೆಯನ್ನು ಮೆಚ್ಚಿ ಮೂಕವಾಗಿತ್ತು ಅಷ್ಟೆ!

* * * *

ರಾತ್ರಿ. ಎರಡೂವರೆ ಗಂಟೆ; ಆಗ ತಾನೇ ಗಡಿಯಾರವು ತನ್ನ ಸುಪ್ರಸೋಹರ ಶಬ್ದದಿಂದ ಕಾಲವೆಷ್ಟಾಗಿದೆಯೆಂಬುದನ್ನು ಗಂಟೆ ಹೊಡೆದು ತೋರಿಸಿದೆ. ಸ್ವಾಮಿಯ ಬಂಗಲೆಯ ಮೂರನೆಯ ಮಹಡಿಯ ಮೇಲೆ, ಸುಸಜ್ಜಿತವಾಗಿ ಅಪರೂಪವಾದ ಸೌಂದರ್ಯ ಸೌಖ್ಯಸಾಧನಗಳಿಂದ ಕಂಗೊಳಿಸುವ ಒಂದು ಶಯ್ಯಾಗೃಹದಲ್ಲಿ ಒಂದು ಮಂಚದ ಮೇಲೆ ಒಬ್ಬ ತರುಣಿಯು ಮಲಗಿದ್ದಾಳೆ. ಔಷಧ ಪ್ರಯೋಗದಿಂದ ಪ್ರಾಪ್ತವಾಗಿದ್ದ ಮೂರ್ಛೆಯು ಸಡಿಲಿ ಆಕೆಯು ಈಗೀಗ ಕಣ್ಣುಬಿಡುತ್ತಿದ್ದಾಳೆ. ಆ ಮಂದಿರದಲ್ಲಿ ತುಂಬಿರುವ ಪನ್ನೀರುವಾಸನೆಯು ಆಕೆಯ ಆಯಾಸವನ್ನು ತೀರಿಸಿ ಮನಸ್ಸಿಗೂ ದೇಹಕ್ಕೂ ಉತ್ಸಾಹವನ್ನು ಕೊಟ್ಟು, ಔಷಧಗಳೂ ಶೈತ್ಯೋಪಚಾರಗಳೂ ಮಾಡಿರುವ ಕೆಲಸವನ್ನೂ ಅದು ಪೂರ್ಣ ಮಾಡುತ್ತಿದೆ.

ಇನ್ನೊಂದು ಗಳಿಗೆಯೊಳಗಾಗಿ ಆಕೆಗೆ ಸಂಪೂರ್ಣವಾಗಿ ಎಚ್ಚರವಾಗಿ

ಎದ್ದು ಕುಳಿತಳು. ಪಕ್ಕದಲ್ಲಿದ್ದ “ನರ್ಸ್”ಳೂ ಅದನ್ನು ಕಂಡು ವಿನಯ ವಾಗಿ “ಆರೋಗ್ಯವಾಗಿದ್ದೀರಿ ತಾನೆ?” ಎಂದು ಕೇಳಿದಳು.

ತರುಣಿಯು ಆ ಅಪರಿಚಿತಧ್ವನಿಯಿಂದ ಚಕಿತಳಾಗಿ “ನಾನೆಲ್ಲಿ ದ್ದೇನೆ?” ಎಂದಳು.

ನರ್ಸಳೂ ಮೊದಲಿನ ವಿನಯಕ್ಕೆ ನಗುವಿನದಷ್ಟು ಮೆರಗುಕೊಟ್ಟು “ಏನೂ ದಿಗಿಲಿಲ್ಲ. ತಾವೆಲ್ಲಿ ಇರಬೇಕು ಎಂದು ದೈವಸಂಕಲ್ಪವಿತ್ತೋ ಅಲ್ಲಿಯೇ ಇದ್ದೀರಿ. ಅದಿರಲಿ. ತಾವು ಈಗ ಆರೋಗ್ಯವಾಗಿದ್ದೀರಷ್ಟೇ?” ಎಂದಳು.

ತರುಣಿಗೆ ಅದೇಕೋ ಆ ಉತ್ತರವು ಸರಿತೋರಲಿಲ್ಲ. ಮತ್ತೆ “ಇದು ಯಾರ ಮನೆ?” ಎಂದು ಕೇಳಿದಳು.

“ಅದು ತಮಗೇ ಗೊತ್ತಾಗುವುದು. ಈಗ ನಾನು ಹೋಗುವೆನು. ಮತ್ತೆ ನನ್ನ ಸಹಾಯವು ತಮಗೆ ಬೇಕಾದಾಗ ಇಗೋ, ಇಲ್ಲಿರುವ ಈ ಬಟನ್ ಒತ್ತಿ. ನಾನು ಕೂಡಲೇ ಬರುವೆನು” ಎಂದು ಹೇಳಿ ಹೊರಟು ಹೋದಳು.

ತರುಣಿಯು ಅವಳನ್ನೇ ದೃಷ್ಟಿಸಿನೋಡುತ್ತಿದ್ದರೂ, ಅಲ್ಲಿದ್ದ ದೀಪದ ಮಂದಪ್ರಭೆಯಲ್ಲಿ ಆಕೆಯು ಹೊರಟು ಹೋದಳೆಂಬುದು ಮಾತ್ರ ಗೊತ್ತಾಯಿತೇ ಹೊರತು ಎಲ್ಲಿ ಹೋದಳು ಎಂಬುದು ತಿಳಿಯಲಿಲ್ಲ. ಆಕೆಗೆ ತಿಳಿವು ಬಂದ ಹಾಗೆಲ್ಲ ಏಕೋ ಗಾಬರಿಯಾಯಿತು. ತಾನು ಮನೆಯಲ್ಲಿ ಅತ್ತೆಗೆಯ ಜೊತೆಯಲ್ಲಿ ಮಲಗಿದ್ದವಳು ಈಗ ಇಲ್ಲಿಗೆ ಬಂದಿರುವುದು ಹೇಗೆ? ನೋಡಿಕೊಂಡರೆ ತಾನು ಈಗ ತಾನೇ ಸ್ನಾನಮಾಡಿರುವಂತಿದೆ. ಉಟ್ಟಿರುವುದು ಹೊಸ ಸೀರೆ, ಮೈತುಂಬ ಸೋಪಿನ ಪರಿಮಳ. ತನಗೆ ಕನಸೇನೋ? ಕನಸನ್ನು ಕಂಡು ಆ ಭ್ರಾಂತಿಯಲ್ಲಿ ನಿಜವನ್ನು ಮರೆತಿರ ಬಹುದೋ ಎಂದುಕೊಂಡಳು. ಮೃದುವಾಗಿ ಗ್ರಾಮೋಫೋನ್ ಹಾಡಿತು. ಅದನ್ನು ಕೇಳಿ, ತಾನು ಎಚ್ಚರವಾಗಿದ್ದೇನೆ ಎಂದುಕೊಂಡಳು. ಬಡವರ ಮನೆಯ ಹೆಣ್ಣು. ಭಾಗ್ಯವಂತನಾದ ಭೋಗಿಯ ಶಯ್ಯಾಗೃಹವನ್ನು ಕಂಡು

ಬೆಚ್ಚಿ ಏನು ಮಾಡಬೇಕು ಎಂಬುದು ತಿಳಿಯದೆ ಮುಗ್ಧವಾಗಿ ಹೋಯಿತು.

ಮತ್ತೆ ಗಡಿಯಾರವು ಕಾಲುಗಂಟೆಯ ಸದ್ದು ಮಾಡಿತು. ಆಕೆಗೆ ಆಗ ಸಂಪೂರ್ಣವಾಗಿ ಮತ್ತೆ ಎಚ್ಚರವಾಗಿ ಇನ್ನೊಮ್ಮೆ ಗಾಬರಿಯಾಯಿತು. ಬೆಳಕನ್ನು ಹಚ್ಚಿ ತಾನಿರುವ ಮಂದಿರವನ್ನು ನೋಡಬೇಕೆಂದುಕೊಂಡಳು. ಒಂದು ಸಣ್ಣ ಟೇಬಲ್‌ಲ್ಯಾಂಪ್, ಅದಕ್ಕೊಂದು ಹಸರು ಮುಸುಕು. ಅದನ್ನೇ ಅನುಸರಿಸಿ ಹೋಗಿ, ಬಟನ್ ಒತ್ತಿದಳು. ದೊಡ್ಡ ದೀಪವೊಂದು ಹತ್ತಿ ಮಂದಿರವನ್ನೆಲ್ಲ ತನ್ನ ಬೆಳಕಿನಿಂದ ಬೆಳಗಿತು.

ಮಂದಿರವು ಭವ್ಯವಾಗಿದೆ, ವಿಶಾಲವಾಗಿದೆ, ಎತ್ತರವಾಗಿದೆ, ನೆಲಕ್ಕೆ ಉತ್ತಮವಾದ ರತ್ನಗಂಬಳಿ. ಅಲ್ಲಲ್ಲಿ ಗೋಡೆಯ ಮಗ್ಗುಲಲ್ಲಿ ಸೋಫಾಗಳು. ಗೋಡೆಗೆ ಒಂದೊಂದು ಭಾರಿಯ ಕನ್ನಡಿ. ಸುತ್ತಲೂ ಮನೋಹರವಾದ ಚಿತ್ರಗಳು. ಮೂಲೆಮೂಲೆಗಳಲ್ಲಿ ಒಂದೊಂದು ಭಾರಿಯ ಕುಂಡ. ಅದರಲ್ಲಿ ಒಂದೊಂದು ಹೂವಿನ ಗಿಡ, ಒಂದು ಕಡೆ ಒಂದು ತೂಗುಮಣೆ. ಇನ್ನೊಂದು ಕಡೆ ಒಂದು ತೂಗುಮಂಚ. ಎರಡರ ನಡುವೆ ತಾನು ಕುಳಿತಿರುವ ಭಾರಿಯ ಮಂಚವೊಂದು. ಛಾವಣಿಯಲ್ಲಿ ಅಲ್ಲಲ್ಲಿ ಗಂಧರ್ವರ ಬೊಂಬೆಗಳು ಕೃತ್ರಿಮ ಪುಷ್ಪಹಾರಗಳನ್ನು ಹಿಡಿದು ನಿಂತಿವೆ.

ತರುಣಿಯು ಅದುವರೆಗೆ ಅಂತಹ ಮಂದಿರವನ್ನೇ ನೋಡಿರಲಿಲ್ಲ. ಅವಳಿಗೆ ಅದನ್ನು ಕಂಡು ಸಂತೋಷವಾಗಲಿಲ್ಲ. ಗಾಬರಿಯಾಯಿತು. ಕೂಗಿಕೊಳ್ಳಬೇಕು ಎನ್ನಿಸಿತು. ಆದರೆ ಆ ಹೊತ್ತಿನಲ್ಲಿ ಕೂಗಿ ಫಲವೇನು ? ಅಥವಾ ಇನ್ನೇನು ಮಾಡಬೇಕು ಎಂಬುದನ್ನು ಅರಿಯದೆ, ಮಂಚವನ್ನು ಒರಗಿಕೊಂಡು ಹಾಗೆಯೇ ನಿಂತಿದ್ದಳು. ಅತ್ತಕಡೆಯ ಬಾಗಿಲು ಸರಿದು, ತರುಣನೊಬ್ಬನು ಆ ಮಂದಿರದೊಳಕ್ಕೆ ಬಂದನು. ಅವನು ಬಂದುದು ಆಕೆಗೆ ತಿಳಿಯಲಿಲ್ಲ.

ಬಂದವನು ಒಂದು ಸೋಫಾದಲ್ಲಿ ಕುಳಿತನು. ಅದೂ ಆಕೆಗೆ ತಿಳಿಯಲಿಲ್ಲ, ಅವನೇ ಮಾತನಾಡಿಸಿದನು: "ನೀವು ಯಾವ ರೀತಿಯಲ್ಲಿಯೂ ಸಂಕೋಚ ಪಡದೆ ಸಂತೋಷವಾಗಿರಬೇಕೆಂದು ಪ್ರಾರ್ಥನೆ."

ಮಾತಿನ ಶಬ್ದವನ್ನು ಕೇಳಿ ಅವಳು ಹಿಂತಿರುಗಿ ನೋಡಿದಳು. ದೊಡ್ಡ ದೀಪದ ಬೆಳಕು ಪೂರ್ಣವಾಗಿ ಬಿದ್ದು ಆ ಮುಖವನ್ನು ಬೆಳಗಿತು. ತರುಣನು ಆಶ್ಚರ್ಯಚಕಿತನಾಗಿ "ನೀವು ಯಾರು?" ಎಂದನು. ಎದ್ದು ಮುಂದೆ ಬಂದನು. ತರುಣಿಯು ದಿಟ್ಟವಾಗಿ ನಿಂತುಕೊಂಡಳು. ಅವಳು ಹಾಗೆ, ನಿರ್ಭೀತಳಾಗಿ ನಿಂತುದನ್ನು ಕಂಡು ತರುಣನೂ ಅಲ್ಲಿಯೇ ನಿಂತನು.

"ನೀವು ಆ ಮನೆಯಲ್ಲಿಯೇ ಇದ್ದರೇನು?"

"ಯಾವ ಮನೆಯಲ್ಲಿ?"

"ಆ ಉಪಾಧ್ಯಾಯರ ಮನೆಯಲ್ಲಿ?"

"ಹೌದು. ನಾನು ಅವರ ತಂಗಿ"

"ಹಾಗೆಯೇ?"

"ನೀವು ಮತ್ತಾರೆಂದುಕೊಂಡಿದ್ದಿರಿ?"

"ಆ ಮನೆಯಲ್ಲಿ ಒಬ್ಬಳು ರೂಪವತಿಯಿದ್ದಾಳೆ. ಅವಳೇ ಎಂದು ಕೊಂಡಿದ್ದೆ"

"ಅವಳಿಗೂ ನಿಮಗೂ ಪರಿಚಯವುಂಟೇನು?"

"ಇಲ್ಲ. ನಾನು ಪರಿಚಿತರನ್ನು ಇಲ್ಲಿಗೆ ಬರಮಾಡಿಕೊಳ್ಳಲು ಅಷ್ಟು ಶ್ರಮಪಡುವುದಿಲ್ಲ, ಇಲ್ಲಿಗೆ ಬರುವವರೆಲ್ಲ ಅಪರಿಚಿತರು. ನಾನು ಯಾರ ಸಮೀಪ ಪರಿಚಯವನ್ನು ಬಯಸುವರೋ ಅಂತಹವರು ಮಾತ್ರ."

"ನಾನು ಇಲ್ಲಿಗೆ ಬಂದುದು ಹೇಗೆ?"

"ನನಗೆ ಈ ಊರಿನಲ್ಲಿ ಸ್ನೇಹಿತರು ಅನೇಕರಿದ್ದಾರೆ. ಅವರು ನಾನು ಬಯಸಿದ ವಸ್ತುವನ್ನು ನನಗೆ ತಂದು ಕೊಡಬಲ್ಲರು."

"ನನ್ನನ್ನು ಇಲ್ಲಿಗೆ ಏಕೆ ಕರಿಸಿದಿರಿ?"

"ನೀನು ರೂಪವತಿ. ಕರೆಯಿಸಿದವನು ನಾನು ರಸಿಕ."

"ನೀನೊಂದು ಮೃಗ"

"ಆಹುದು. ನಾವೆಲ್ಲರೂ ಮೃಗಗಳೇ! ದಿನ ದಿನವೂ ಕೆಲವು ಹೊತ್ತು ಮಾನವನ ವೇಷವನ್ನು ಹಾಕಿಕೊಂಡು ಮೆರೆಯುವೆವು ಅಷ್ಟೇ!

ಹೃದಯವನ್ನು ಬಿಚ್ಚಿ ಭೂತಗನ್ನಡಿ ಹಾಕಿ ನೋಡಿದರೆ, ನಮ್ಮ ಒಳ ಒಳಗಿನ ಆಶೆಗಳಿಂದ ನಮ್ಮನ್ನು ಅಳೆದರೆ, ನಾವು ಮೃಗದ ಮಟ್ಟಕ್ಕೂ ಏರುವೆವೋ ಇಲ್ಲವೋ ಸಂದೇಹ! ಅದಿರಲಿ, ನೀನು ನನಗೆ ಅನುಕೂಲಳೋ ಪ್ರತಿಕೂಲಳೋ ಅದು ಹೇಳು."

ಅವಳದುವರೆಗೆ ಅಂತಹ ಪ್ರಶ್ನೆಗೆ ಉತ್ತರ ಕೊಡುವುದಿರಲಿ; ಯಾವನಾದರೂ ಒಬ್ಬನು ಅಂತಹ ಸಮಯದಲ್ಲಿ ತನ್ನನ್ನು ಅಂತಹ ಪ್ರಶ್ನೆಯನ್ನು ಕೇಳಿಯಾನು ಎಂದೂ ಯೋಚಿಸಿರಲಿಲ್ಲ. ಅವಳಿಗೆ ಆ ಪ್ರಶ್ನೆಗೆ ಏನು ಉತ್ತರ ಕೊಡಬೇಕೋ ತಿಳಿಯಲಿಲ್ಲ. ಥಟ್ಟನೆ ಮಂಚದ ಮೇಲೆ ಕುಳಿತು ಬಿಟ್ಟಳು. ಯುವಕನು ಅದನ್ನು ತನಗನುಕೂಲವಾದ ಚೇಷ್ಟೆಯೆಂದು ಭಾವಿಸಿ ಎರಡು ಅಡಿ ಮುಂದಿಟ್ಟನು. ಅದನ್ನು ಕಂಡು ಅವಳು ರೇಗಿ, ಹಾವಿನಂತೆ ಮೊರೆದೆದ್ದು "ನಿಲ್ಲು! ಒಂದು ಹೆಜ್ಜೆ ಮುಂದಿಟ್ಟೇಯೆ. ನೀನು ಈ ದೇಹವನ್ನು ಮುಟ್ಟುವ ಮೊದಲು ಮೃತ್ಯುವು ನಿನ್ನನ್ನು ಮುಟ್ಟುವುದು" ಎಂದಳು.

ಅವನು ಆ ಅಂಜಿಕೆಯ ಮಾತನ್ನು ಗಮನಿಸಲಿಲ್ಲ. ನಗುನಗುತ್ತ ಮುಂದುವರಿದನು. ಅವಳು ಭೀತಿಕಾತರಳಾಗಿ "ನಿಲ್ಲು ನಿಲ್ಲು!" ಎಂದು ಕಿರಿಚಿಕೊಳ್ಳುತ್ತ, ಅಲ್ಲಿದ್ದ ಒಂದು ಸಣ್ಣ ಕಾಲುಮಣೆಯನ್ನೇ ತೆಗೆದುಕೊಂಡು ಹೊಡೆಯುವುದಕ್ಕೆ ಸಿದ್ಧಳಾದಳು.

ಯುವಕನು ಅಲ್ಲಿಯೇ ನಿಂತನು: ಅವಳನ್ನು ಮತ್ತೊಮ್ಮೆ ಅಡಿಯಿಂದ ಮುಡಿಯವರೆಗೆ ಚೆನ್ನಾಗಿ ಕಣ್ಣಿಟ್ಟು ನೋಡಿ "ಈ ಚಂಡಿಯ ವತಾರವೇಕೆ? ನಾನು ಯಾವಾಗಲೂ ಒಬ್ಬರ ಇಷ್ಟಕ್ಕೆ ವಿರೋಧವಾಗಿ ಏನನ್ನೂ ಮಾಡುವನಲ್ಲ. ನೀನು ಧೈರ್ಯವಾಗಿರು. ಶಾಂತಳಾಗಿ ಕುಳಿತು ಎರಡು ಮಾತು ಕೇಳು. ಆ ಮೇಲೆ ನಿನಗೆ ತೋರಿದಂತೆ ಮಾಡುವೆಯಂತೆ! ಅಲ್ಲಿಯೇ ಕುಳಿತುಕೋ. ನಾನು ಮುಂದೆ ಬರುವುದಿಲ್ಲ" ಎಂದು ಸಮಾಧಾನ ಮಾಡುತ್ತ ಅಲ್ಲಿಯೇ ಕುಳಿತುಕೊಂಡನು.

ಅವಳು ಇನ್ನೂ ಹಾಗೆಯೇ ನಿಂತಿದ್ದಳು.

"ಈ ಮಂದಿರದಲ್ಲಿ ಹಲವು ಮಂದಿ ವಿಲಾಸಿನಿಯರು ಒಂದೆರಡು ದಿನ

ಗಳು ಸ್ವೇಚ್ಛೆಯಾಗಿ ವಿಹರಿಸಿ ಸಂತೋಷಪಟ್ಟುಕೊಂಡು, ಮುಂದೆಯೂ ಸುಖವಾಗಿರುವುದಕ್ಕೆ ಅನುಕೂಲಗಳನ್ನು ಕಲ್ಪಿಸಿಕೊಂಡಿದ್ದಾರೆ. ಬಾಯಾರಿದವನು ನದಿಗಿಳಿದು ಸಮಯೋಚಿತವಾಗಿ ಸ್ನಾನಪಾನಾದಿಗಳಿಂದ ತೃಪ್ತನಾಗಿ ನದಿಯನ್ನು ಬಿಟ್ಟು ಮೇಲಕ್ಕೆ ಬರುವಂತೆ, ಚೆಲುವೆಯರನ್ನು ಯಥಾಶಕ್ತಿ ಆರಾಧಿಸಿದ್ದೇನೆ. ನೀನೂ ಚೆಲುವೆ. ದೇವರು ನಿನ್ನನ್ನು ಬಡವರ ಮನೆಯಲ್ಲಿ ಹುಟ್ಟಿಸಿದ್ದರೂ ಭಾಗ್ಯವತಿಯಾಗುವ ಸಾಧನವನ್ನು ನಿನಗೆ ಕೊಟ್ಟಿದ್ಧಾನೆ. ನಿನಗೆ ಬೇಕಾದುದನ್ನು ಕೊಡಬಲ್ಲ ಭಾಗ್ಯವನ್ನು ನನಗೂ ಕೊಟ್ಟಿದ್ದಾನೆ. ಒಂದೆರಡು ದಿನ ಇಲ್ಲಿ ಸುಖವಾಗಿದ್ದು ನನ್ನನ್ನೂ ಸುಖಿಯನ್ನಾಗಿ ಮಾಡು. ನೀನೂ ಆಜೀವವೂ ಸುಖಿಯಾಗಿರುವುದಕ್ಕೆ ಸಾಧನಗಳನ್ನು ನಾನು ಕಲ್ಪಿಸಿಕೊಡುವೆನು. ಬೇಡ. ಆ ತೀಕ್ಷ್ಣ ದೃಷ್ಟಿಯನ್ನು ಇತ್ತ ಪ್ರಸರಿಸಬೇಡ. ನಾನು ಸೌಂದರ್ಯೋಪಾಸಕ ನನಗೆಬೇಕಾಗಿರುವುದು ನಿನ್ನ ಮುಗುಳು ನಗೆ, ಕೊಂಚ ಆಟ, ಬೇಸರಗೊಳ್ಳದಿರು. ನೀನು ನನ್ನನ್ನು ಬಹುಶಃ ನೋಡಿರಲಾರೆ. ಒಂದು ವೇಳೆ ನೋಡಿದ್ದರೂ ನೋಡಿರಬಹುದು. ನಾನು ನಿಮ್ಮ ಮನೆಯ ಮುಂದೆ ಮೂರು ನಾಲ್ಕು ಸಲ ಕುದುರೆಯ ಮೇಲೆ ಬಂದಿದ್ದೆ, ನಿಮ್ಮ ಮನೆಗೊಬ್ಬ ಮುದುಕಿಯು ಬಂದು ನಾನು ಕುದುರೆಯ ಮೇಲೆ ಹೋಗುತ್ತಿದ್ದಾಗ, ನನ್ನನ್ನು ತೋರಿಸಿ, ನಿಮ್ಮ ಮನೆಯಲ್ಲಿದ್ದ ಇನ್ನೊಬ್ಬ ಚೆಲುವೆಗೆ ಚಪಲ ತೋರಿಸಿದಳು. ಅವಳು ಹೀಗೆ ಚಪಲಪಡುವುದು ನಮ್ಮಂಥವರಿಗಲ್ಲ ಎಂದು ನಿಟ್ಟುಸಿರುಗರೆದು ಸುಮ್ಮನಾದಳಂತೆ. ಆ ನಿಟ್ಟುಸಿರು ನನಗಾಗಿ ಬಂದಿತೆಂದು ತಿಳಿದು ಅವಳನ್ನು ಇಲ್ಲಿಗೆ ಕರೆಯಿಸುವ ಯತ್ನ ಮಾಡಿದೆ. ನೀನು ಅವಳಿಗಿಂತ ರೂಪವತಿ. ಅವಳಿಗಿಂತ ಚೆಲುವೆ. ನೀನು ಬಂದೆ. ನನ್ನ ಹೆಸರನ್ನು ಕೇಳಿಬಲ್ಲೆಯಾ? ಈ ಸುತ್ತಮುತ್ತಲಿನ ಚೆಲುವೆಯರೆಲ್ಲರಿಗೂ ನನ್ನ ಪರಿಚಯವುಂಟು. ಸುತ್ತಮುತ್ತಲಿನ ಹೆಂಗುಸರಲ್ಲಿ ಚೆಲುವೆಯರೆಂದು ಹೆಸರಾದವರು ಯಾರೂ ಇಲ್ಲಿಗೆ ಬರದೆ ಇಲ್ಲ. ಹೊಸಬರನ್ನು ಆಶಿಸುವ ನನ್ನ ಮನಸ್ಸು ಅನೇಕ ವೇಳೆ ಇಲ್ಲಿಂದ ಎಲ್ಲಾದರೂ ದೂರ ದೇಶಕ್ಕೆ ಹೊರಟು ಹೋಗಬೇಕು ಎನ್ನಿಸುತ್ತದೆ. ನಾನು ಹಾಗೆಂದುಕೊಳ್ಳುತ್ತಿದ್ದಾಗ,

ದೇವರೆ ನನ್ನನ್ನು ತಡೆಯಬೇಕೆಂದು ನಿನ್ನಂತಹ ರತ್ನವನ್ನು ಇಂದು ದಯಪಾಲಿಸಿದ್ದಾನೆ. ನನ್ನ ಹೆಸರು ಗೋಪಾಲಸ್ವಾಮಿ. ನಾನು ಕೊಳಲು ಗೋಪಾಲನ ಹಾರವನ್ನು ಅನೇಕರಿಗೆ ಕೊಟ್ಟಿದ್ದೇನೆ. ಇಂದೂ ಅನೇಕರ ಕತ್ತಿನಲ್ಲಿ ಆ ಹಾರವನ್ನು ನೀನು ಕಂಡಿರಬಹುದು. ನಿನ್ನ ರೂಪವು ನನಗೆ ಏನೋ ಹಂಬಲವನ್ನು ಹುಟ್ಟಿಸುತ್ತಿದೆ. ನೀನು ನನಗೆ ಒಲಿದರೆ, ನಾನು ಇದುವರೆಗೆ ಯಾರಿಗೂ ಒಲಿಯದಿದ್ದಂತೆ ನಿನಗೊಲಿದು ನಿನ್ನನ್ನು ಆರಾಧಿಸುವೆನು. ಅಳಬೇಡ. ಇಲ್ಲಿಗೆ ಬರುವ ಹೆಂಗುಸು ಯಾರಿಗೂ ಅವಳಿಷ್ಟಕ್ಕೆ ವಿರೋಧವಾಗಿ ಏನೂ ಆಗುವುದಿಲ್ಲ. ಅದರಿಂದ, ನೀನು ಧೈರ್ಯವಾಗಿರು. ನಾನು ಒಲ್ಲೆನೆಂದರೆ ನಿನ್ನನ್ನು ಮತ್ತೆ ನಿನ್ನ ಮನೆಗೆ ಬಿಟ್ಟು ಬರುವಂತೆ ಹೇಳುವೆನು. ಆದರೆ ಹೊರಟು ಹೋಗುವ ಮುನ್ನ ಇದಿಷ್ಟು ಚಿಂತಿಸು. ಹಲವರು ಸೌಜನ್ಯದ ಭ್ರಾಂತಿಯಿಂದ ಈ ಸ್ಥಳವನ್ನೂ ದೊರಕಿದ ಅವಕಾಶವನ್ನೂ ತೊರೆದು ಹೋದವರು ಮತ್ತೆ ಹಂಬಲಿಸಿ ಹಂಬಲಿಸಿ ತಾವಾಗಿ ಇಲ್ಲಿ ಬಂದು ನನ್ನನ್ನು ಅನುಗ್ರಹಿಸಿದ್ದಾರೆ. ಧೈರ್ಯವಾಗಿರು. ಇನ್ನೂ ಒಮ್ಮೆ ಹೇಳುತ್ತೇನೆ. ನೀನು ಇಲ್ಲಿಗೆ ಬರುವಾಗ ದಾರಿಯಲ್ಲಿ ತೊಂದರೆಯಾಗಬಾರದೆಂದು ನಿನಗೆ ಔಷಧ ಪ್ರಯೋಗ ಮಾಡಿದ್ದುದು ಉಂಟು. ಆದರೆ, ಇಲ್ಲಿಗೆ ಬಂದಮೇಲೆ, ಆ ಔಷಧದ ಪ್ರಭಾವವನ್ನು ಇಳಿಸಲು ನಿನಗೆ ಸ್ನಾನಾದಿಗಳನ್ನು ಮಾಡಿಸಿರುವವರೆಲ್ಲ ಹೆಂಗುಸರೇ ! ಮತ್ತು ಇಲ್ಲಿಗೆ ಬಂದಮೇಲೆ ನಿನಗೆ ಮತ್ತಾವ ಔಷಧವನ್ನೂ ಪ್ರಯೋಗಿಸುವುದಿಲ್ಲ. ಇಲ್ಲಿ ನಾನು ಮೊದಲಾಗಿಯಾರೂ ನಿನ್ನ ಇಷ್ಟಕ್ಕೆ ವಿರೋಧವಾಗಿ ವರ್ತಿಸುವದಿಲ್ಲ. ಇನ್ನು ಮೂರು ದಿನಗಳು ನಿನಗೆ ಇಷ್ಟವಿರಲಿ ಇಷ್ಟವಿಲ್ಲದಿರಲಿ ನೀನಿಲ್ಲಿ ಇರಬೇಕು. ಅಷ್ಟರೊಳಗೆ ಇಗೋ ಈ ಬೀಗದ ಕೈಗಳನ್ನು ತೆಗೆದುಕೊಂಡು ಇಲ್ಲಿರುವ ಕನ್ನಡಿಗಳ ಹಿಂದೆ ಇರುವ ಗೂಡುಗಳನ್ನು ಪರೀಕ್ಷಿಸು. ಒಂದೆಡೆ ಇಲ್ಲಿಗೆ ಬಂದು ನನ್ನನ್ನು ಕೃತಾರ್ಥನನ್ನು ಮಾಡಿರುವ ಸುಂದರಿಯರ ಫೋಟೋಗಳಿವೆ. ಮತ್ತೊಂದೆಡೆ, ಅವರು ಬಂದಾಗ ಹೇಗಿದ್ದರು, ಹೋದಾಗ ಹೇಗೆ ಆಗಿದ್ದರು ಎಂಬುದರ ಫೋಟೋಗಳಿವೆ. ಮಗುದೊಂದೆಡೆ, ಇಲ್ಲಿ ಏನೇನು ದೊರೆಯುವುದು ಎಂಬುದರ

ಪಟ್ಟಿಯಿವೆ. ಎಲ್ಲವನ್ನೂ ನೋಡು. ನಾನು ಮತ್ತೆ ನಾನಾಗಿ ಬರುವುದಿಲ್ಲ,
ಅದು ನನ್ನ ಪದ್ಧತಿಗೆ ವಿರೋಧವಾದುದು. ನಿನಗೆ ಸಮ್ಮತವಾದಾಗ
ನೀನು ಹೇಳಿಕಳುಹಿಸು. ನಾನು ಆಗ ಬಂದು ಭಕ್ತನು ದೇವಿಯನ್ನು
ಆರಾಧಿಸುವಂತೆ ನಿನ್ನನ್ನು ಆರಾಧಿಸಿ ಕೃತಾರ್ಥನಾಗುವೆನು."

ಎಂದು ಹೇಳಿ ಎದ್ದನು. ಅವನು ತನ್ನ ವಾಗ್ವೈಖರಿಯಿಂದ ಅವಳ
ಮನಸೋತು ತನ್ನನ್ನು ತಡೆಯುವಳೆಂದು ಭಾವಿಸಿದ್ದುದು ತಪ್ಪು ಎಂಬುದು
ಅವನಿಗೇ ತಿಳಿದೂ ಖೇದವೂ ಆಶ್ಚರ್ಯವೂ ಆಯಿತು. ಹಿಂದೆ ಈ ಜಾತಿಯ
ಬೇಟೆಗಳೂ ಬಂದಿದ್ದುವು. ಅವನ್ನು ಹೀಗೆಯೇ ಒಂದೆರಡು ದಿನಗಳಲ್ಲಿ
ಕಪ್ಪಕ್ಕೆ ಕೆಡವಿಯೂ ಇದ್ದುದುಂಟು. ಆದರೆ ಆಗ ಬೇಟೆಗಾರನಂತೆ
ಅವುಗಳನ್ನು ಕಂಡು ಆನಂದಿಸಿದ್ದವನಿಗೆ ಇಂದು ಏಕೋ ಏನೋ ಭಾವ
ಪರಿವರ್ತನೆಯಾಗಿತ್ತು. ಇಂದು ತಾನೇ ಬೇಟೆಯಾಗಿದ್ದು ಅವಳೇ ಬೇಟೆಗಾರ
ನಾಗಿರುವಂತೆ ಭಾಸವಾಗುತ್ತ ಬಂದಿತು. ಅವಳನ್ನು ನೋಡಿದ ಆ ಅಲ್ಪ
ಕಾಲದಲ್ಲಿಯೇ ತನ್ನ ಮನಸ್ಸು ಅವಳಿಗೆ ಮಾರುಹೋಗಿ, ತಾನಾಗಿ ಅವಳ
ದಾಸ್ಯವನ್ನು ತೋರಿ ತೋರಿ, ಅದನ್ನು ಪ್ರಕಟವಾಗಿ ಉದ್ಘೋಷಿಸಲು
ಸಿದ್ಧವಾಗಿರುವಂತೆ ತೋರಿತು. ತಾನು ಅವಳನ್ನು ನೋಡಿದಾಗ, ಅವಳನ್ನು
ಚೆಲುವು ಮೊಗವನ್ನು ಮೊದಲು ಕಂಡಾಗ, ಕೈಯಲ್ಲಿ ಹಿಡಿದಿದ್ದ ಸಿಗರೇಟು
ಇನ್ನೂ ಹಾಗೆಯೇ ಇರುವುದನ್ನು ಕಂಡು ಅವನಿಗೆ ಆಶ್ಚರ್ಯವಾಗಿತ್ತು.
ಇದುವರೆಗೆ ದಿಟ್ಟತನವಳಿದು ವ್ಯವಹರಿಸುವುದೇನು ಎಂಬುದನ್ನೇ ಅರಿಯದ
ಅವನಿಗೆ ಈ ದಿನ ಇವಳ ಕೈಲಾದರೂ ಕಟ್ಟಿಕೊಳ್ಳಬೇಕು ಎನ್ನಿಸಿತು.
ಭಾವವಿಂತು ಅಡಿಯಿಂದ ಮುಡಿಯವರೆಗೂ ಸೋತಿರಲು ಬುದ್ಧಿಯು
ಮಾತ್ರ ಇನ್ನೂ ಜಾಗ್ರತವಾಗಿದ್ದು, ಸರಿ, ಸರಿ, ಈ ಬೊಂಬೆಯು ಕೈಬೊಂಬೆ
ಯಾಗಬೇಕು ಸರಿಸರಿ ಎಂದು ಅವನನ್ನು ಹಾಸ್ಯ ಮಾಡುತ್ತ ಎಳೆದು
ಕೊಂಡು ಹೋಯಿತು. ಭಾವವು ಅಲ್ಲಲ್ಲಿ ಅವನನ್ನು ತಡೆದು, ಈ ಹೆಣ್ಣು
ಎಲ್ಲರಂತಲ್ಲ ನೋಡು. ನಿಂತು ಹಿಂತಿರುಗಿ ಮತ್ತೊಮ್ಮೆ ನೋಡಿ ಹೋಗು
ಎಂದು ಹೇಳುತ್ತಿದ್ದರೂ ಬುದ್ಧಿಯೂ ಹಾಗಲ್ಲ. ಇದುವರೆಗೆ ಇಲ್ಲ.

ಈಗೇಕೆ? ಆಗುವದಿದ್ದರೆ ಮುಂದಾಗಲಿ. ಇನ್ನು ಮೂರು ದಿನದ ಅವಕಾಶ ಇದೆ. ಏನು ಮಹಾ! ಮದ್ದಾನೆಗಳೇ ಮುಗ್ಗರಿಸಿ ಬಿದ್ದವಂತೆ, ಇದರ ದೇನು? " ಎಂದು ಏನೇನೋ ಹೇಳಿ ಕರೆದುಕೊಂಡೇ ಹೋಗಿಬಿಟ್ಟಿತು. "

* * * *

ಸ್ವಾಮಿಯಂದು ನಿದ್ದೆಮಾಡಲು ಬಲು ಪ್ರಯತ್ನಪಟ್ಟನು. ಫಲ ವಾಗಲಿಲ್ಲ. ಒಬ್ಬ ಸಿಂಹಿಣಿಯು ತನ್ನನ್ನು ತನ್ನ ಪಂಜರಗಳಿಂದ ಹೊಡೆದು ಘಾತಿಸಿರುವಂತೆಯೂ, ತಾನು ಆ ಘಾತವನ್ನೇ ಪ್ರೀತಿಯಿಂದ ಒಪ್ಪಿ ಕೊಂಡು ಆ ಸಿಂಹಿಣಿಗೆ ತನ್ನನ್ನು ಒಪ್ಪಿಸಿಕೊಳ್ಳಲು ಸಿದ್ಧನಾಗಿರುವಂತೆಯೂ ಜಾಗ್ರತ್ಸ್ವಪ್ನವಾಗುವುದು. ಮತ್ತೆ ಎಚ್ಚರಗೊಂಡು "ಪಟ್ಟಣವನ್ನು ನುಂಗುವವನಿಗೆ ಕದವು ಹಪ್ಪಳವಂತೆ!" ಎಂದುಕೊಂಡು ನಗುವನು. ತನ್ನ ಈ ಮನೋಭಾವವು ಇತರರಿಗೆ ತಿಳಿದರೆ ಅವರೆಷ್ಟು ನಗುವರು ಎಂದು ಭಾವಿಸಿ ವಿಹ್ವಲನಾಗುವನು. ಮೋಹವು ಹುಟ್ಟುವುದಕ್ಕೇ ಅವಕಾಶವಿಲ್ಲ ದಂತೆ ಅವಳು ಪಿಶಾಚಿಯಾಗಿ ನಿಂತು ಬಿಟ್ಟಿರಲು ಮನಸ್ಸೇಕೆ ಹಂಬಲಿಸ ಬೇಕು? ಅವಳ ಹೆಸರನ್ನು ಅರಿಯದೆ, ಹೀಗೆ ಅವಳಿಗಾಗಿ ಒದ್ದಾಡುವು ದೆಂದರೆ ಯಾವ ನ್ಯಾಯ? ಎಲ್ಲವೂ ಇರಲಿ. ನೀಲಳೂ ನನ್ನ ಈ ಭಾವವನ್ನು ಕಂಡು ಕೇಳಿದರೆ ಏನೆಂದು ಕೊಂಡಳು? ಅಂತಹವಳಲ್ಲಿಯೇ ಸಿಡಿದುನಿಂತ ನನ್ನ ಮನಸ್ಸು, ಇವಳಿಗೆ ಸೋತಿದೆಯೇ? ಸಮುದ್ರದಲ್ಲಿ ಬಿರುಗಾಳಿ ಯೆದ್ದಾಗಲೂ ಈಜಬಲ್ಲ ಧೀರನಿಂದು ಈ ಕೊಳದಲ್ಲಿ ಮುಳುಗಿ ಹೋದನೇ? ಛೀ! ಛೀ! ಇದೆಲ್ಲ ಬರಿಯ ಭ್ರಾಂತಿ, ಇಲ್ಲ ಇಲ್ಲ, ಅವಳು ಚೆನ್ನಾಗಿ ಪ್ರತಿ ಭಟಿಸಿದಳು. ಅದನ್ನು ಕಂಡು ಮನಮೆಚ್ಚಿ ಭಲೆಯೆಂದಿತು. ಇದೆಲ್ಲ ನಾಟಕದ ಹೆಣ್ಣುವೇಷದವರ ಮೇಲಿನ ಮೋಹದಂತೆ ಕ್ಷಣಿಕಲಾದುದು. ಎಂದು ಏನೇನೋ ಯೋಚಿಸಿದನು. ಅಂತೂ ಬೆಳಗಾಯಿತು.

ಒಂದು ದಿನವಾಯಿತು. ಎರಡನೆಯ ದಿನ ಬೆಳಗಾದರೂ ವಿಲಾಸು ಬಂದಿರದಿಂದ ಕರೆಯೂ ಬರಲಿಲ್ಲ. ಸ್ವಾಮಿಯು ಉದ್ವಿಗ್ನನಾದನು. ಅವಳ ಮುಖವನ್ನು ಹಗಲೂ ಒಮ್ಮೆ ನೋಡಬೇಕೆಂದು ಆಸೆ, ಆದರೆ ಅದುವರೆಗೆ

ತಾನು ಅಂತಹ ಕೆಲಸವನ್ನು ಮಾಡಿ ಅಭ್ಯಾಸವಿಲ್ಲ. ತನಗೆ ಬೇಕೆಂದ ವಸ್ತುವು ತಾನಾಗಿ ಬರುವಂತೆ ಮಾಡಿಕೊಳ್ಳುತ್ತಿದ್ದ ಭಾಗ್ಯವಂತನಿಂದು ಹುಟ್ಟು ದರಿದ್ರನಂತೆ ಹುಡುಕಿಕೊಂಡು ಹೋಗಲು ಮನಸ್ಸು ಬರದು.

ಕೊನೆಗೆ 'ನರ್ಸ್'ಳನ್ನು ಕರೆಸಿಕೊಂಡನು. ಅವಳಿಂದ ಏನೇನೋ ಕೇಳಿ ತಿಳಿದುಕೊಳ್ಳಬೇಕೆಂದು ಆಸೆ, ಅಲ್ಲಿಯೂ ಏನೋ ಬಿಂಕ. ಕೇಳದೆ, ಕೇಳಲಾರದೆ, ಕೊನೆಗೆ ಅವಳ ಹೆಸರೇನು ? ಎಂದನು.

"ಗೊತ್ತಿಲ್ಲ."

"ಆ ! ನಿಜವೇ ! ನಿನ್ನೆಯಿಂದ ಅವಳ ಹೆಸರನ್ನೂ ಹೊರಡಿಸಲಾರದೆ ಹೋದೆಯಾ ?"

"ಸ್ವಾಮಿ ! ಆ ಹೆಣ್ಣು ಎಲ್ಲ ಹೆಣ್ಣುಗಳಂತಹ ಹೆಣ್ಣಲ್ಲ, ಬಹಳ ಉತ್ತಮ ಜಾತಿಯ ಹೆಣ್ಣು. ನೀನು ಇನ್ನೂ ಎರಡು ಮೂರು ದಿನ ಅವಳನ್ನು ಹೀಗೆ ಸೆರೆಯಿಟ್ಟಿದ್ದರೆ, ಖಂಡಿತವಾಗಿ ಅವಳು ಪ್ರಾಣಬಿಡುವಳು. ನಾನೇನೋ ಅವಳು ನಿನಗೆ ಒಲಿಯುವಳೆಂದು ನಂಬಿಲ್ಲ. ನಿನ್ನೆಯಿಂದ ಮೊಕವೆತ್ತಿ ನನ್ನನ್ನೂ ನೋಡಿಲ್ಲ ಬಲ್ಲೆಯಾ ? ನಾನೆಂದುಕೊಂಡಿರುವುದು ಸುಳ್ಳಾಗಿ ಅವಳೇನಾದರೂ ನಿನಗೊಲಿದರೆ, ಅದು ನಿನ್ನ ಭಾಗ್ಯ. ಬಹಳ ಉತ್ತಮ ಜಾತಿಯ ಹೆಣ್ಣು. ಆ ಮುದುಕಿಯಿಂದ ಅವಳ ಹೆಸರನ್ನು ತಿಳಿದುಕೊಂಡು ಬರುವಂತೆ ಹೇಳಿ ಕಳುಹಿಸಿದ್ದೇನೆ."

"ಬೇಡ. ಮೊದಲು ಅವಳನ್ನು ಹಿಂದೆಕ್ಕೆ ಕರೆಸು. ನೀನೂ ಹೊಗಳಬೇಕಾದರೆ, ನಿನ್ನಿಂದ ಹೊಗಳಿಸಿಕೊಳ್ಳಬೇಕಾದರೆ, ಇವುಗಳಲ್ಲಿ ಏನೋ ಒಂದು ವಿಶೇಷವಿರಬೇಕು. ಅವಳ ಮುಖವನ್ನೇ ನಾನು ಚನ್ನಾಗಿ ನೋಡಿಲ್ಲ, ಆದರೂ ಮನಸ್ಸು ಅವಳನ್ನು ಒಂದು ದೊಡ್ಡ ಪದಾರ್ಥವೆಂದು ಭಾವಿಸಿ, ನೀನು ಹೇಳಿದುದನ್ನೆಲ್ಲ ಒಪ್ಪುತ್ತಿದೆ. ಇಂತಹ ಪುಣ್ಯವಂತೆಯ ಹೆಸರನ್ನು ಆ ಪಾಪಿಯಿಂದ ತಿಳಿಯುವುದು ಬೇಡ. ನೀನು ನನ್ನನ್ನು ರೂಪವಂತನೆಂದು ಶ್ರೀಮಂತನೆಂದು ಬುದ್ಧಿವಂತನೆಂದು ಎಷ್ಟೋ ಸಲ ಹೊಗಳಿರುವೆ. ಈ ಗುಣಗಳೆಲ್ಲ ಅವಳನ್ನು ಒಲಿಸಿ ಅವಳ ಬಾಯಿಂದಲೇ ಅವಳ ಹೆಸರನ್ನು ಕೇಳುವ ಯೋಗವನ್ನು ಸಂಪಾದಿಸಿಕೊಟ್ಟರೆ ಆಗಲಿ, ಇಲ್ಲದಿದ್ದರೆ ಬೇಡಲೇಬೇಡ."

" ನನಗೆ ನಗೆ ಬರುತ್ತಿದೆ ಸ್ವಾಮಿ ! ಇದೇನು. ಅನನುಭವಿಯಾದ ಹುಡುಗನಂತೆ ಪುಸ್ತಕದ ಮಾತುಗಳನಾಡಲು ಹೊರಟೆಯಲ್ಲ !"

" ಹೌದು. ಇದುವರೆಗೆ ಹೆಣ್ಣು ಎಂದರೆ ಆಟದ ಬೊಂಬೆಯೆಂದೇ ಇದ್ದೆ. ಈಗ ಇವಳನ್ನು ಕಂಡು ಹೆಣ್ಣು ಆಟದ ಬೊಂಬೆಯಲ್ಲ ಪೂಜಿಸ ಬೇಕಾದ ವಿಗ್ರಹವೆನ್ನಿಸುತ್ತಿದೆ."

" ಇವಳಲ್ಲಿ ಏನು ಕಂಡು ಹಾಗೆನ್ನಿಸಿತು ?"

" ಅದನ್ನು ನಾನೂ ಕಾಣೆ. ಬುದ್ಧಿಗೆ ಗೋಚರಿಸದ ಮನೋಮಂಡಲ ದಲ್ಲಿ ಹುಟ್ಟಿರುವ ಭಾವವದು. ನಾನು ಹೇಳಲಾರೆ. ಆದರದನ್ನು ಅನುಭವಿ ಸುತ್ತಿದ್ದೇನೆ. ನನ್ನೊಡನೆ ಅವಳಾಡಿದುದು ಎರಡು ತಿರಸ್ಕಾರದ ಮಾತು. ಆ ಎರಡು ಮಾತನ್ನೇ ಹೃದಯವು ಉಪದೇಶವಾಣಿಯಂತೆ ಜಪ ಮಾಡು ತ್ತಿದೆ ಬಲ್ಲೆಯಾ? ಅವಳನ್ನು ನೋಡಲು ಕಣ್ಣಿರಲಿ, ಮನಸ್ಸಿರಲಿ, ದೇಹವು ತಪಕಪಡುತ್ತಿದೆ. ನೀನು ಹೇಳಿದುದು ನಿಜ. ಅವಳು ನನಗೆ ಒಲಿದರೆ ಅದು ನನ್ನ ಭಾಗ್ಯ. ಇಲ್ಲವಾದರೆ ಬಹಳ ಅನರ್ಥ. ಅಷ್ಟೇನು ? ಬಹುಶಃ ನನ್ನ ಜೀವ ಮಾನದಲ್ಲಿ ಇದೇ ಕೊನೆಯ ಬೇಟೆ !"

" ಇಲ್ಲ. ಅದು ಸಾಧ್ಯವಿಲ್ಲ, ನೀನು ಇದುವರೆಗೆ ಮಾಡಿದ ಹಾಗೆ ಮುಂದೆಯೂ ಮಾಡದೆ ಇರುವುದು ಸಾಧ್ಯವಿಲ್ಲ, ಹೀಗೆ ಇರುವುದು ನಿನಗೆ ಪಾಠವಾಗಿ ಹೋಗಿದೆ. ಅದನ್ನು ಬಿಡಲು ಆಗುವುದಿಲ್ಲ"

" ಏನೋ ? ಪಿಶಾಚಿಯಾಗಿ ಹಿಡಿದಿರುವ ಈ ಹಂಬಲು ಬಿಟ್ಟರೆ ಆ ಮೇಲೆ ಆ ಮಾತು. ಈಗ, ಅವಳ ಮಾತು ಹೇಳು. ನಿನ್ನೆಯದಿನ ಏನೇನು ನಡೆಯಿತು ?"

" ಏನೂ ಇಲ್ಲ. ನಿನ್ನೆಯೆಲ್ಲ ಆ ಹುಡುಗಿ ಊಟವನ್ನೂ ಮಾಡಲಿಲ್ಲ. ನೀರೂ ಕುಡಿಯಲಿಲ್ಲ. ನಾನೂ ಕಲಿತ ಬುದ್ಧಿಯನ್ನೆಲ್ಲ ಖರ್ಚು ಮಾಡಿದೆ; ಹಾಸುಗೆಯ ಮೇಲೆ ಮೊಗುವಡಿಯಾಗಿ ಬಿದ್ದವಳು ತಲೆಯನ್ನೇ ಮೇಲಕ್ಕೆ ತ್ತಲಿಲ್ಲ. ಕೊನೆಗೆ, ಹಾಸುಗೆಯೂ ಅವನದೇ ! ಬಲ್ಲೆಯಾ? ಎಂದೆ, ಥಟ್ಟನೆ ಹಾಸುಗೆಯನ್ನು ಬಿಟ್ಟುಬಂದು ರತ್ನಗಂಬಳಿಯನ್ನು ಅತ್ತ ಓಸರಿಸಿ ನೆಲದ

ಮೇಲೆ ಮಲಗಿಬಿಟ್ಟಳು. ನಿನ್ನೆಯ ರಾತ್ರಿಯೆಲ್ಲ ಹಾಗೆಯೇ ನೆಲದ ಮೇಲೆಯೇ ಬಿದ್ದಿದ್ದಳು. ನನಗೂ ಅವಳಿಗೆಲ್ಲಿ ಶೀತವಾಗುವುದೋ ಎಂದು ಭೀತಿಯಾಯಿತು. ಏನು ಮಾಡಲಿ ? ''

ಸ್ವಾಮಿಯು ನೀರವವಾಗಿ ಎಲ್ಲವನ್ನೂ ಕೇಳಿದನು. ಏಕೋ ಏನೋ ಅವನ ಮನಸ್ಸು ಅವಳನ್ನು ಮತ್ತೂ ಮೆಚ್ಚಿಕೊಂಡಿತು. '' ಏಳು ನಾನು ಬರುವೆನು. ಇಬ್ಬರೂ ಹೋಗೋಣ '' ಎಂದನು.

'' ಇವೊತ್ತು ಬೇಡ. ನಾಳೆಯಾಗಲಿ. ''

ಸ್ವಾಮಿಗೆ ಬಹಳ ಅಸಮಾಧಾನವಾಯಿತು. ಆದರೂ ಅವಳ ಮಾತನ್ನು ತಳ್ಳಿ ಹಾಕದೆ ಒಪ್ಪಿಕೊಂಡನು.

* * * *

ಇನ್ನೆರಡುದಿನ ಕಳೆಯಿತು. ಸ್ವಾಮಿಯು ಮೊದಲು ಕೊಟ್ಟಿದ್ದ ಹಾಯಿದೆಯು ಮುಗಿದೂ ಒಂದು ದಿನವಾಯಿತು. ಈ ಎರಡು ದಿನಗಳೂ ಸ್ವಾಮಿಯು ಪಟ್ಟ ಶ್ರಮವು ದೇವರಿಗೆ ಗೊತ್ತು. ಅವಳು ನಾಲ್ಕುದಿನದಿಂದ ನೀರು ಕೂಡ ಕುಡಿದಿಲ್ಲ. ಕಳುಹಿಸಿಬಿಡೋಣವೆಂದರೆ ಮನಸ್ಸು ಬರದು. ಇಟ್ಟುಕೊಳ್ಳೋಣವೆಂದರೆ, ಹೀಗೆ, ಕೊನೆಗೆ ಬಲವಂತದಿಂದಲಾದರೂ ಆಹಾರವನ್ನು ಕೊಡಿಸೋಣವೆಂದು ಡಾಕ್ಟರನ್ನು ಕರೆಯಿಸಬೇಕೆಂದು ಕೊಂಡನು. ಮಧ್ಯಾಹ್ನ ಮೂರು ಗಂಟೆಗೆ ಡಾಕ್ಟರಿಗೆ ಫೋನ್ ಮಾಡಿ ಯಾಯಿತು. ಬರುವೆನು ಎಂದ ಡಾಕ್ಟರು ನಾಲ್ಕು ಗಂಟೆಯಾದರೂ ಬರಲಿಲ್ಲ. ಆಳನ್ನು ಕಳುಹಿಸಿದರೆ, ಹೊತ್ತಾದೀತು ಎಂದು ಸ್ವಾಮಿಯೂ ತಾನೇ ಕಾರು ತೆಗೆದುಕೊಂಡು ಹೊರಟನು. ಅವನಿಗೀಗ ಬೇರೆ ಯೋಚನೆಯೇ ಇಲ್ಲ, ಅವಳನ್ನು ಹೇಗಾದರೂ ಏನಾದರೂ ಮಾಡಿ ಒಲಿಸಿಕೊಳ್ಳಬೇಕು. ಆದರೂ ಹೇಗಾದರೂ ಏನಾದರೂ ಮಾಡಿ ಎಂಬುದರಲ್ಲಿ ಅನ್ಯಾಯ ಪ್ರವರ್ತನೆಯ ಯೋಚನೆಯು ಮಾತ್ರವಿಲ್ಲ. ಮನಸ್ಸು ಒಲಿಯಬೇಕಾದ ಈ ಕೆಲಸ ಹೇಗೋ ಆಗಿ ಹೋಗಲಿ. ಆ ಮೇಲೆ ನ್ಯಾಯಾನ್ಯಾಯ ನೋಡಿ

ಕೊಳ್ಳೋಣ ಎನ್ನುವುದು. ಆದರೂ ಅದೇನೋ ಗೌರವ ಅವಳಲ್ಲಿ. ಅವಳಲ್ಲಿ ಎಳ್ಳಷ್ಟು ತಪ್ಪಿ ನಡೆಯುವುದಕ್ಕೂ ಮನಸ್ಸು ಬರದು.

ಡಾಕ್ಟರನು ಸಿಕ್ಕುವುದು ತಡವಾಯಿತು. ಅವನು ಸ್ವಾಮಿಗೆ ಬಹಳ ಬೇಕಾದವನು. ಹಾಗಿಲ್ಲದೆ ಕೇವಲ ಹಣಕ್ಕಾಗಿ ಮಾತ್ರ ಬರುವವನಾಗಿದ್ದರೆ, ಸ್ವಾಮಿಯ ಹೃದಯದ ಆತುರದಿಂದಲೇ ಕಾರ್ಯವು ನಡೆದು ಹೋಗಿದ್ದರೆ, ಅವನ ತಲೆಯು ಆಕ್ಷಣವೇ ಚೂರು ಚೂರಾಗಬೇಕಾಗಿತ್ತು.

ಸ್ವಾಮಿಯು ಡಾಕ್ಟರನ್ನು ಕರೆದುಕೊಂಡು ಬಂದನು. ಆ ಕಾರು ಅದುವರೆಗೂ ಅಷ್ಟು ಜಾಗ್ರತೆಯಾಗಿ ಓಡಿಯೇ ಇರಲಿಲ್ಲ. ಸ್ವಾಮಿಗೆ ಒಂದೇ ಯೋಚನೆ. ಅದು ಅವಳದು. ಒಂದು ಗಳಿಗೆ ತಡವಾದರೆ ಏನಾಗಿ ಹೋಗುವಳೋ ?

ಸ್ವಾಮಿಯು ಹೆಬ್ಬಾಗಿಲನ್ನು ದಾಟಿ ಬಂಗಲೆಯ ಬಳಿಗೆ ಬರುತ್ತಿದ್ದಾನೆ. ಏನೋ ಸದ್ದಾದಂತೆ ಆಯಿತು. ಸ್ವಾಮಿಗೂ ಕೇಳಿಸಿದರೂ ಮನಸ್ಸು ಅತ್ತ ಹೋಗಲಿಲ್ಲ. ಡಾಕ್ಟರನು ಸದ್ದಾದ ಕಡೆಗೆ ತಿರುಗಿ ಓ ಮೈ ಗಾಡ್ ! "ಸ್ವಾಮಿ ! ನಿಲ್ಲಿಸು ಗಾಡಿ ನಿಲ್ಲಿಸು." ಎಂದು ಕೂಗಿಕೊಂಡನು.

ಸ್ವಾಮಿಯು ಥಟ್ಟನೆ ಗಾಡಿಯನ್ನು ನಿಲ್ಲಿಸಿದನು. ಏಕೆ ಏನು ಎಂಬುದನ್ನು ತಿಳಿಯದೆಯೇ ಅವನಿಗೆ ಎದೆಯು ಝಲ್ಲೆಂದಿತು. ಡಾಕ್ಟರನು ಗಾಡಿಯಿಳಿದು ಓಡಿ ಹೋದನು. ಸ್ವಾಮಿಯು ಹಿಂದೆಯೇ ಹೋದನು. ಅಲ್ಲಿ ಒಂದು ಹೆಣ್ಣು. ಮರದಿಂದ ಬಿದ್ದಿದೆ, ಭಾರಿಯ ಪೆಟ್ಟು ತಗಲಿ ಕೂಗುವುದಕ್ಕೂ ಸಾಮರ್ಥ್ಯವಿಲ್ಲದೆ ಹೋಗಿ ಮೂರ್ಛೆಬಂದಿದೆ. ಸ್ವಾಮಿಯು ಅವಳನ್ನು ಕಂಡನು. ಅವನಿಗೂ ಪ್ರಜ್ಞೆ ತಪ್ಪಿತು.

ಅವನಿಗೆ ಮತ್ತೆ ಪ್ರಜ್ಞೆಯು ಬರುವ ವೇಳೆಗೆ ಅವನು ತನ್ನ ಕೋಣೆಯಲ್ಲಿ ಮಂಚದ ಮೇಲೆ ಮಲಗಿದ್ದನು. ನರ್ಸ್‌ಳು ಅವನಿಗೆ ಉಪಚಾರ ಮಾಡುತ್ತಿದ್ದಾಳೆ. ಪ್ರಜ್ಞೆ ಬರುತ್ತಲೂ ಮೊದಲಿನ ಪ್ರಶ್ನೆಯಾಗಿ "ಅವಳಿಗೆ ಹೇಗಿದೆ ?" ಎಂದನು.

ಮೂರನೆಯ ಮಹಡಿಯಿಂದ ಹಾರಿಬಿಟ್ಟಳು. ಕಾಲು ಮುರಿದು ಹೋಗಿದೆ.

ಸ್ವಾಮಿಯು ಅಯ್ಯೋ ಎಂದನು. ಆ ಎರಡು ಅಕ್ಷರಗಳಲ್ಲಿ ಜಗತ್ತನ್ನು ತುಂಬುವಷ್ಟು ನೋವು ಇಟ್ಟಣಿಸಿತ್ತು. ಮತ್ತೆ ಪ್ರಜ್ಞೆಯು ತಪ್ಪಿತು.

ನರ್ಸಳು ಅದನ್ನು ಕಂಡು ಆಶ್ಚರ್ಯಚಕಿತಳಾದಳು. "ಹೀಗೂ ಉಂಟೆ? ಸಾವಿರಾರು ಜನ ಹೆಂಗುಸರನ್ನು ಕಂಡವನು ಇನ್ನೂ ಮೈಗೂಡದ ಎಳೆಯ ಹೆಣ್ಣಿಗಾಗಿ ಹೀಗಾಗುವುದೆ?" ಎಂದು ಬಹಳವಾಗಿ ವ್ಯಥಿಸುತ್ತಾ ಮತ್ತೆ ಶೈತ್ಯೋಪಚಾರ ಮಾಡಿದಳು. ಮತ್ತೆ ಪ್ರಜ್ಞೆಯು ಬಂದಿತು.

ಸ್ವಾಮಿಯು ಡಾಕ್ಟರನ್ನು ಕರೆಸಿಕೊಂಡು ಹೇಳಿದನು. "ಡಾಕ್ಟರ್! ನಿನಗೆ ಏನೇನು ಬೇಕೋ ಎಲ್ಲವನ್ನೂ ತರಿಸಿಕೊ. ಎಷ್ಟು ಜನ ಡಾಕ್ಟರರು ಬೇಕೋ ಅಷ್ಟು ಜನರನ್ನು ಕರೆಸಿಕೊ. ಏನು ಬೇಕಾದರೂ ಮಾಡು. ಅವಳನ್ನು ಬದುಕಿಸು. ನೀನು ಕೇಳಿದುದನ್ನು ಕೊಡುವೆನು. ಅವಳನ್ನು ಬದುಕಿಸು. ನೀನೂ ಬದುಕುವೆ."

ಡಾಕ್ಟರನು "ಸ್ವಾಮಿ! ಅದು ನಾನೂ ಬಲ್ಲೆ. ಆದರೆ, ನಾವು ಏನು ಮಾಡಿದರೂ ಎಷ್ಟು ಮಾಡಿದರೂ ನಮ್ಮಿಂದ ಆಚೆ ಇನ್ನೊಂದಿದೆ. ಬದುಕಿಸುವುದೂ ಸಾಯಿಸುವುದೂ ಅದರ ಕೈಯಲ್ಲಿದೆ. ಆಗಲಿ. ಮನುಷ್ಯನ ಬುದ್ಧಿಯೂ ಪ್ರಯತ್ನವೂ ಏನೇನು ಮಾಡಬಲ್ಲುದೋ ಅದಷ್ಟನ್ನೂ ಮಾಡುವೆನು, ಏಟು ಬಹಳ ಜೋರಾಗಿದೆ. ಬದುಕಿದರೂ ಕಾಲು ಮಾತ್ರ ಸೊಟ್ಟೇ ಆಗುವುದು. ಆಗಲಿ. ನೋಡೋಣ" ಎಂದನು.

*    *    *    *

ಹುಡುಗಿಯ ಹೆಸರನ್ನು ಸ್ವಾಮಿಯು ಇಷ್ಟವಿಲ್ಲದಿದ್ದರೂ ಮುದುಕಿಯಿಂದಲೇ ತಿಳಿದುಕೊಂಡನು. ಅವಳ ಹೆಸರು ಇಂದಿರಾ. ಈಗ ಹದಿನೈದು ದಿನವಾಗಿದೆ. ಸ್ವಾಮಿಯು ಅವಳ ರುಗ್ಣಶಯ್ಯೆಯನ್ನು ಬಿಟ್ಟು ಅತ್ತಿತ್ತ ತಿರುಗಿಲ್ಲ. ಈಗ ನರ್ಸ್‌ಗಿಂತ ನರ್ಸಾಗಿ ಅವನು ಅವಳನ್ನು ನೋಡಿಕೊಳ್ಳುತ್ತಿದ್ದಾನೆ. ಹದಿನೈದು ದಿನವಾದರೂ ಇನ್ನೂ ಜ್ಞಾನವು ಬಂದಿಲ್ಲ.

ಒಮ್ಮೊಮ್ಮೆ ಜ್ಞಾನವು ಬಂದಂತೆ ತೋರಿ, ನೋವಿಗಾಗಿ ಹುಡುಗಿಯು ಒದ್ದಾಡುತ್ತಾಳೆ. ಮತ್ತೆ ನೋವಿನ ಬಲವು ಹೆಚ್ಚಾಗಿ, ಮೈಮರೆತು ಹೋಗುತ್ತಿದೆ. ಇತ್ತ ಸ್ವಾಮಿ, ಅವನ ಡಾಕ್ಟರುಗಳು ಮೊದಲಾದ ಒಂದು ಪಡೆಯು ಉಪಚಾರ ಮಾಡಿ ಅವಳನ್ನು ಮೃತ್ಯುಮುಖದಿಂದ ಪಾರು ಮಾಡಲು – ಕಾಲಪಾಶದಿಂದ ತಪ್ಪಿಸಿ ಉಳಿಸಿಕೊಳ್ಳಲು ಯತ್ನಿಸುತ್ತಿದ್ದಾರೆ. ಆದರೂ, ಅವರು ಅಷ್ಟು ಹೆಣಗುತ್ತಿದ್ದರೂ ಇನ್ನೂ ಆಸೆಯಿಲ್ಲ.

ಸ್ವಾಮಿಯು ಡಾಕ್ಟರನ್ನು ಕರೆದು " ಡಾಕ್ಟರ್ ! ಅವಳಿಗೊಂದು ಸಲ ಪ್ರಜ್ಞೆ ಬಂದು ಮಾತನಾಡುವಷ್ಟು ಚೇತನವನ್ನು ತರಿಸು. ನಿನಗೆ ಒಂದು ಸಾವಿರ ರೂಪಾಯಿ ಕೊಡುತ್ತೇನೆ." ಎಂದು ಅಂಗಲಾಚಿಕೊಳ್ಳುತ್ತಿದ್ದಾನೆ. ಆದರೇನು ಮಾಡಲು ಸಾಧ್ಯ? ಪ್ರಜ್ಞೆಯು ಬರಲೊಲ್ಲದು. ಎಲ್ಲರಿಗೂ ಗೊತ್ತು. ಕೊನೆಗಾಣುವುದಕ್ಕೆ ಇನ್ನು ಬಹಳ ದಿನಗಳಿಲ್ಲ ಎಂಬುದು ಎಲ್ಲರೂ ಕಾಯುತ್ತಿದ್ದಾರೆ. ಹುಡುಗಿಯ ಬಂಧುಗಳೂ ಬಂದಿದ್ದಾರೆ.

ಒಂದು ದಿನ ಹಠಾತ್ತಾಗಿ ಜ್ಞಾನವು ಬಂದಿತು. ಸ್ವಾಮಿಯು ಹತ್ತಿರಲೇ ಕುಳಿತಿದ್ದವನು, ಒಂದು ಸ್ವರ್ಗವೇ ಕೈಗೆ ಸಿಕ್ಕಿದವನಂತೆ " ಇಂದಿರಾ!" ಎಂದನು. ಅವನ ಧ್ವನಿಯಲ್ಲಿದ್ದ ನೋವು ಆ ಹುಡುಗಿಯ ಹೃದಯಕ್ಕೆ ವಿದಿತವಾಯ್ತೋ ಅಥವಾ ಅವನು ಅಷ್ಟು ದಿನದಿಂದಲೂ ತ್ರಿಕರಣ ಶುದ್ಧವಾಗಿ ಮಾಡಿದ ಉಪಚಾರವು ಆ ಜೀವಕ್ಕೆ ತಿಳಿದು ಅಂತರಂಗವು ಪ್ರಸನ್ನವಾಗಿತ್ತೋ ಅಂತೂ ಅವಳೂ ಆ ನೋವಿನ ನಡುವೆಯೂ ಪ್ರಸನ್ನೆಯಾಗಿ ಅವನನ್ನು ನೋಡಿದಳು. ಸ್ವಾಮಿಯು ಅದನ್ನು ಕಂಡು, ಉಕ್ಕೇರಿ ಬರುತ್ತಿರುವ ತನ್ನ ದುಃಖ ಪ್ರವಾಹವನ್ನು ತಡೆಯಲಾರದವನಾಗಿ " ಇಂದಿರಾ! ಇಂದಿರಾ! ನನ್ನ ಅಪರಾಧವನ್ನು ಮನ್ನಿಸು ಇಂದಿರಾ! ಅಯ್ಯೋ! ನಿನ್ನನ್ನು ಹೀಗೆ ಇಂತಹ ಸ್ಥಿತಿಗೆ ತಂದ ಪಾಪಿಯು ನಾನು! ನನ್ನನ್ನು ಕ್ಷಮಿಸು. ಇಂದಿರಾ! " ಎಂದು ಗೋಳಾಡಿದನು. ಅತ್ತಿಗೆಯೂ ಅಣ್ಣನೂ "ಹೌದಮ್ಮಾ! ಈತನು ಹೀಗೆಯೇ ಹದಿನೈದು ದಿನಗಳಿಂದ ಗೋಳಾಡುತ್ತಿದ್ದಾನೆ" ಎಂದು ಹೇಳಿದರು. ಹುಡುಗಿಯು ಅತ್ತ ತಿರುಗಿಕೊಂಡಳು.

ಆ ಮುಖದಲ್ಲಿ ಸಮಾಧಾನವೂ ಅಸಮಾಧಾನವೂ ಎರಡೂ ತುಂಬಿದ್ದುವು. ಮತ್ತೆ ಜ್ಞಾನವು ತಪ್ಪಿತು.

ಮತ್ತೆ ಜ್ಞಾನವು ಬಂದಾಗ ಹಾಸುಗೆಯ ಬಳಿ ಇನ್ನು ಯಾರೂ ಇರಲಿಲ್ಲ, ಸ್ವಾಮಿಯೊಬ್ಬನೇ ಅವಳ ಪಾದದ ಊಲದಲ್ಲಿ ತಲೆಯನ್ನಿರಿಸಿಕೊಂಡಿದ್ದಾನೆ. ಅವನಿಗೂ ಸಣ್ಣ ಝೊಂಪು ಹಿಡಿದಿದೆ. ಜ್ಞಾನವು ಬಂದಾಗ ಕೊಂಚ ಹೊರಳಿದ ಕಾರಣದಿಂದಲೇ ನೋವಿನಿಂದ ನರಳಿದ ಆ ಸಣ್ಣ ದನಿಯಿಂದಲೇ ಅವನಿಗೆ ಎಚ್ಚರಾಗಿ "ಇಂದಿರಾ" ಎಂದನು. ಹುಡುಗಿಯು ಸಣ್ಣಗೆ 'ಹೂಂ' ಎಂದಳು.

"ಇಂದಿರಾ! ನೀನು ಇಷ್ಟು ದಿಟ್ಟೆಯೆಂದು ಗೊತ್ತಿದ್ದರೆ ನಾನು ನಿನ್ನನ್ನು ಆ ದಿನವೇ ಕಳುಹಿಸಿಬಿಡುತ್ತಿದ್ದೆ. ನನ್ನ ಅಪರಾಧವನ್ನು ಮನ್ನಿಸು" ಎಂದನು. ಹುಡುಗಿಯು ಇತ್ತ ತಿರುಗಿತು. ಮಾತನಾಡಲಾರದೆ ಕೈಯನ್ನು ನಿಧಾನವಾಗಿ ಎತ್ತಿ ಅವನ ಕೈಯಲ್ಲಿರಿಸಿತು. ಅವನಿಗೆ ಮತ್ತೆ ದುಃಖವು ತಾನೇ ತಾನಾಗಿ ಕೇಳಿಕೊಂಡನು. "ಇಂದಿರಾ! ನಾನು ಮಾಡಿದ ಪಾಪಕ್ಕೆ ಪ್ರಾಯಶ್ಚಿತ್ತ ಮಾಡಿಕೊಳ್ಳಲು ಸಿದ್ಧನಾಗಿದ್ದೇನೆ. ಇದೋ ನಿನ್ನ ಅಣ್ಣ ಅತ್ತಿಗೆಯವರೊಡನೆ ಎಲ್ಲವನ್ನೂ ಹೇಳಿಕೊಂಡಿದ್ದೇನೆ. ಅವರೂ ಒಪ್ಪಿದ್ದಾರೆ. ನೀನು ನನಗೊಂದು ಮಾತು ಕೊಡು ಇಂದಿರಾ! ಈ ಭಯಂಕರ ವಿಪತ್ತಿನಿಂದ ಪಾರಾದರೆ, ಮೃತ್ಯುವು ದಯಮಾಡಿ ನಿನ್ನನ್ನು ಈ ಲೋಕದಲ್ಲಿಯೇ ಉಳಿಸಿದರೆ, ನೀನು ನನ್ನವಳಾಗುವಿಯಾ? ನನ್ನನ್ನು ಮದುವೆ ಮಾಡಿಕೊಂಡು ಧರ್ಮಪತ್ನಿಯಾಗಿ ನನ್ನನ್ನೂ ಕಾಪಾಡುವೆಯಾ?"

ಹುಡುಗಿಯು ಏನೋ ಯೋಚನೆ ಮಾಡಿತು. ಮೊದಮೊದಲು ನಿಷ್ಠುರವಾಗಿದ್ದರೂ ಹಣ್ಣಾಗಿ, ಮೃದುವಾಗಿ ಹಿಡಿದಿದ್ದ ಕೈಯನ್ನು ಒತ್ತಿ "ಒಂದು ಕಟ್ಟು" ಎಂದು ಬಹಳ ಕಷ್ಟದಿಂದ ಎಳೆದೆಳೆದು ಹೇಳಿತು.

ಮೈಯೆಲ್ಲ ಕಿವಿಯಾಗಿ ಕೇಳುತ್ತಿದ್ದ ಸ್ವಾಮಿಯು "ಆಗಲಿ. ನೀನು ಮಾಡಿದ ಕಟ್ಟಿಗೆ ಒಳಪಡುತ್ತೇನೆ. ನಿನ್ನ ಮಾತು ವೇದವಾಕ್ಯವೆಂದು ಭಾವಿಸಿ ನಡೆದುಕೊಳ್ಳುತ್ತೇನೆ. ನಿನ್ನ ಅಪ್ಪಣೆಯನ್ನು ತಲೆಯಲ್ಲಿ ಹೊತ್ತು ನಡೆಸುತ್ತೇನೆ. ಏನು ಹೇಳು" ಎಂದನು.

ಹುಡುಗಿಯು ಮತ್ತೆ ಕಷ್ಟದಿಂದ ನುಡಿಯಿತು " ಇನ್ನು ಮೇಲೆ. . ಯಾರನ್ನೂ. . . ." ಸ್ವಾಮಿಯು ಫ್ಲಾಸ್ಕಿನಲ್ಲಿದ್ದ ಹಾಲನ್ನು ಕುಡಿಸಿದನು. ಸುಖೋಷ್ಣವಾದ ಹಾಲನ್ನು ಕುಟಿಕರಿಸಿ ಸಚೇತನಳಾಗಿ ಉಳಿದ ಮಾತನ್ನು ನುಂಗಿಸಿದಳು: " ಯಾರನ್ನೂ ಹೀಗೆ. . .ಹಿಡಿತರಿಸಕೂಡದು. ಮನೆಗಳನ್ನು ಮುರಿಯಬಾರದು."

ಸ್ವಾಮಿಯು ಕೂಡಲೆ ಶಪಥಪೂರ್ವಕವಾಗಿ ಹೇಳಿದನು: " ಇಲ್ಲ. ಇಂದಿರಾ! ಇನ್ನು ಮೇಲೆ ಮತ್ತೊಬ್ಬಳನ್ನು ಮುಟ್ಟುವುದಿಲ್ಲ. ಕಣ್ಣೆತ್ತಿ ನೋಡುವುದಿಲ್ಲ. ಇನ್ನೊಬ್ಬರ ಸುದ್ದಿಯೇ ನನಗೆ ಬೇಡ. ನೀನೊಬ್ಬಳು ನನ್ನವ ಳಾಗು. ನನಗೆ ಸಾಕು. ನೀನು ನನ್ನವಳಾದರೆ ನನಗೆ ಸ್ವರ್ಗವೂ ಬೇಡ. ಇದೋ ನಿನ್ನ ಪಾದದಾಣೆ!" ಎಂದು ಅಂಗಲಾಚಿಕೊಂಡನು.

ಇಂದಿರೆಯು ಹಿಡಿದಿದ್ದ ಕೈಯನ್ನು ಮತ್ತೆ ಒತ್ತಿದಳು. ಸ್ವಾಮಿಯು ಕಾತರನಾಗಿ ಆತುರದಿಂದ ಅವಳ ಮುಖವನ್ನೇ ನೋಡುತ್ತಿದ್ದಳು. ನೋವಿ ನಿಂದ, ನಿಶ್ಯಕ್ತಿಯಿಂದ, ಅಲೆಯುತ್ತಿರುವ ಕಣ್ಣಾಲಿಯನ್ನು ಪ್ರಯತ್ನ ಪುರ ಸ್ಸರವಾಗಿ ಒಮ್ಮೆ ನಿಲ್ಲಿಸಿಕೊಂಡು ಸ್ನೇಹದಿಂದ ಮಮತೆಯಿಂದ ಅವನನ್ನು ನೋಡುತ್ತಾ " ಹಾಗಾದರೆ, . . . . ನಾನು . . . . ನಿನ್ನವಳು . . . . ಇದು ವರೆಗೂ. . . ಬದುಕಬೇಕು . . . . ಎಂಬ ಆಸೆಯಿರಲಿಲ್ಲ . . . . ಈಗ. . . ಆಶೆ ಯಾಗುತ್ತಿದೆ. . ನನ್ನನ್ನು ಬದುಕಿಸಿಕೋ. ." ಎಂದಳು.

ಸ್ವಾಮಿಯು ಆಕೆಯು ಕಷ್ಟದಿಂದ ಎತ್ತಿದ ಆ ಕೈಯನ್ನು ತನ್ನ ಕತ್ತಿನ ಮೇಲೆ ಇರಿಸಿಕೊಂಡನು. ಮುಖವನ್ನು ಮುಖದಲ್ಲಿ ಅಂಜುತ್ತ ಅಂಜುತ್ತ ಇಟ್ಟನು. ಮತ್ತೆ ಇಂದಿರೆಯು ಪ್ರಜ್ಞಾಶೂನ್ಯಳಾದಳು.

ಮರುದಿನದಿಂದ ಇಂದಿರೆಗೆ ಕೊಂಚ ಗುಣಮುಖವಾದಂತೆ ತೋರಿತು. ಆಗಾಗ ಪ್ರಜ್ಞೆ ಬರುವುದು. ಸ್ವಾಮಿಯನ್ನು ಕಂಡು ಪ್ರಸನ್ನಳಾಗಿ ನಗುವಳು. ಕೂಡಲೆ ಮುಖವು ಕೆಂಪಾಗಿ ಪ್ರಜ್ಞೆ ತಪ್ಪಿಹೋಗುವುದು. ಆಕೆಯನ್ನು ನೋಡಿಕೊಳ್ಳುತ್ತಿದ್ದ ಒಬ್ಬ ಡಾಕ್ಟರು, ಇನ್ನೊಬ್ಬನಿಗೆ ಅದನ್ನು ತೋರಿಸಿ, " ಸ್ವಾಮಿಯನ್ನು ಇಲ್ಲಿಂದ ತಪ್ಪಿಸುವುದು ಒಳ್ಳೆಯದಲ್ಲವೇ?"

ಎಂದನು. "ಇದೊಂದು ಹುಚ್ಚು ! ಕೊನೆಯ ಗಂಟೆಗಳ ಸೌಖ್ಯವನ್ನು ತಪ್ಪಿಸುವ ಪಾಪ ನಮಗೇಕೆ ಸುಮ್ಮನಿರು !" ಎಂದನು.

ಅದೇದಿನ ನಡುರಾತ್ರಿಯಲ್ಲಿ ಸ್ವಾಮಿಯು ಅವಳನ್ನು ಮೊದಲನೆಯ ಸಲ ಕಂಡ ಹೊತ್ತಿನಲ್ಲಿಯೇ ಇಂದಿರೆಯ ಜೀವಪಕ್ಷಿಯು ದೇಹಪಂಜರ ವನ್ನು ಬಿಟ್ಟು ಹಾರಿ ಹೋಯಿತು.

* * * *

ಸುಮಾರು ರಾತ್ರಿ ಹನ್ನೊಂದೂವರೆಗಂಟೆಯಿರಬಹುದು. ನಗರೋ ದ್ಯಾನದಲ್ಲಿ ಸಂಚಾರವೆಲ್ಲ ಹೆಚ್ಚು ಕಡಿಮೆ ನಿಂತುಹೋಗಿದೆ. ದೂರದ ಒಂದು ಮೂಲೆಯಲ್ಲಿ ಸಾಮಾನ್ಯವಾಗಿ ಹಗಲೂ ಜನಸಂಚಾರವಿಲ್ಲದೆಡೆಯಲ್ಲಿ ಒಂದು ವ್ಯಕ್ತಿಯು ಕುಳಿತಿದೆ. ಕರಿಯ ಉಡುಪು ರಾತ್ರಿಯ ಕತ್ತಲ ಸಲ್ಲಿಯೂ ಮರದ ದಟ್ಟವಾದ ನೆರಳಿನಲ್ಲಿಯೂ ಸೇರಿ ಹೋಗಿ ಆ ವ್ಯಕ್ತಿಯ ಇರವನ್ನು ಕಷ್ಟಪಟ್ಟು ಗುರ್ತಿಸಬೇಕಾಗಿದೆ.

ವ್ಯಕ್ತಿಯು ಸ್ಥಿರನಾಗಿ ಕುಳಿತಿದ್ದರೂ ಹೃದಯದಲ್ಲಿ ಚಾಂಚಲ್ಯವು ತಾನೇ ತಾನಾಗಿದೆ. ಜೀವನದಲ್ಲಿ ಬೇಸರವು ಒಡೆದು ಮೂಡಿ, ಮೃತ್ಯುವಿಗೆ ಆಹ್ವಾನವನ್ನು ಕೊಡುವ ಮುಖಮುದ್ರೆಯಲ್ಲಿ ಕುಳಿತಿದ್ದಾನೆ. ಕಣ್ಣಿನ ನೋಟವು ಶೂನ್ಯವಾಗಿದ್ದರೂ ಸ್ಥಿರವಾಗಿದೆ, "ಸರಿ. ಇಲ್ಲಿಗೆ ಎಲ್ಲವೂ ಮುಗಿಯಿತು. ಇದಿಷ್ಟಕ್ಕಾಗಿ ನಾನು ಹುಟ್ಟಿದುದು ?" ಎಂದು ನಿಷ್ಠುರ ನಾಗಿ ಸೃಷ್ಟಿಕರ್ತನ ಬುದ್ಧಿಯನ್ನು ತೂಗುವ ಮನಸ್ಸಿನಲ್ಲಿದ್ದವನಂತೆ ಇದ್ದಾನೆ.

ಹಠಾತ್ತಾಗಿ ಅವನ ಗಮನವನ್ನು ಯಾವುದೋ ಒಂದು ದೊಡ್ಡ ಶಬ್ದವು ಎಳೆಯಿತು. ಇಬ್ಬರು ಜಗಳವಾಡುತ್ತಿದ್ದಾರೆ. ಒಬ್ಬನು ಇನ್ನೊಬ್ಬ ನನ್ನು ವಾಚಾಮಗೋಚರವಾಗಿ ಬಯ್ಯುತ್ತಿದ್ದಾನೆ. ಇನ್ನೊಬ್ಬನು ಬೈಗಳ ಹಿಂದೆ ಬರಬಹುದಾದ ಏಟುಗಳನ್ನು ನಿರೀಕ್ಷಿಸುತ್ತ ಭಯಭೀತನಾಗಿದ್ದರೂ ಮೊಂಡನಾಗಿ "ಬೇಕಾದ್ದುಮಾಡೋ, ನಿನ್ನ ಕೈಯಲ್ಲಾದದ್ದೆಲ್ಲಮಾಡೋ, ನಾನು ಕೊಡೋದಿಲ್ಲ" ಎನ್ನುತ್ತಿದ್ದಾನೆ.

ವ್ಯಕ್ತಿಯ ಮನಸ್ಸು ಆ ಸ್ಥಿತಿಯಲ್ಲಿಯೂ ಅತ್ತ ಕಡೆಗೆ ತಿರುಗಿ, ಹೋಗಿ ನೋಡೋಣವೆನ್ನಿಸಿತು. "ಯಾರೋ ನನ್ನಂತೆಯೇ ಅಸುಖಿಗಳು. ನಾನು ನನ್ನ ವಿಧಿಯೊಡನೆ ಕಾದುತ್ತಿದ್ದೇನೆ. ಅವರು ಒಬ್ಬರಿಗೊಬ್ಬರು ಕಾದಾಡುತ್ತಿದ್ದಾರೆ. ಎಲ್ಲಾದರೂ ಹೋಗಲಿ. ನನಗೇನು?" ಎಂದು ಹಾಗೆಯೇ ಕುಳಿತುಕೊಂಡನು.

ಇನ್ನೊಂದು ಗಳಿಗೆಯೊಳಗಾಗಿ ಎರಡು ಮೂರು ಪೆಟ್ಟುಗಳ ಗೊರ ಗೊರ ಧ್ವನಿಯೂ ಕೇಳಿಸಿತು. "ಲೋ ಬಿಡೋ ಕೊಡುತೀನಿ ಬಿಡೋ" ಎಂಬ ವ್ಯಕ್ತಾವ್ಯಕ್ತ ಭಾಷಣವೂ ಕಿವಿಗೆಬಿತ್ತು. ವ್ಯಕ್ತಿಗೆ ಇನ್ನು ಸುಮ್ಮನೆ ಕುಳಿತುಕೊಳ್ಳುವುದು ಸಾಧ್ಯವಾಗಲಿಲ್ಲ. ಜಗಳವು ನಡೆಯುತ್ತಿದ್ದ ಕಡೆಗೆ ಓಡಿಹೋಗಿ, ಜಗಳವಾಡುತ್ತಿದ್ದ ಇಬ್ಬರನ್ನೂ ಬಿಡಿಸಿ ವಿಚಾರಿಸಿದನು. ಅವರಿಬ್ಬರೂ ಭಿಕ್ಷುಕರು. ಬೆಳಗಿನಿಂದ ಇಬ್ಬರಿಗೂ ಏನೂ ಸಿಕ್ಕಿರಲಿಲ್ಲ. ರಾತ್ರಿ ಒಂದು ಮನೆಯವರು ಒಂದು ತುತ್ತಾಗುವಷ್ಟು ಅನ್ನ ಕೊಟ್ಟಿದ್ದಾರೆ. ಅದು ತನಗೂ ಕೊಡೆಂದು ಒಬ್ಬನು ಕೇಳುತ್ತಿದ್ದಾನೆ. ಇನ್ನೊಬ್ಬನು ಕೊಡುವುದಿಲ್ಲವೆನ್ನುತ್ತಿದ್ದಾನೆ ಇದೇ ಜಗಳ.

ವ್ಯಕ್ತಿಗೆ ಯೋಚನೆಯು ಬಂದಿತು: "ಇಬ್ಬರೂ ನಿರ್ಗತಿಕರು. ಒಪ್ಪೊತ್ತಿನ ಊಟಕ್ಕೂ ಗತಿಯಿಲ್ಲದವರು. ಇಂಥವರಿಗೂ ಜೀವನವು ಬೇಕಾಗಿದೆ. ನನಗೇಕೆ ಭಾರವಾಗಬೇಕು? ನನಗೆ ಬೇಕಾದ ಹಾಗೆ ಇದೆ, ನಾನೇಕೆ ಜೀವವನ್ನು ತೊರೆಯಲಿ? ಅಹುದು. ದುಃಖದ ಭಾರವಿದೆ. ಈ ಭಾರದಲ್ಲಿ ಜೀವನವನ್ನು ನಿರ್ವಹಿಸುವುದು ಕಷ್ಟ. ಬಾಳುವುದು ಗೋಳಾಗುವಾಗ ಬಾಳಿಗಿಂತ ಸಾವು ಲೇಸು ಎನ್ನಿಸುತ್ತದೆ. ಆದರೆ, ಸತ್ತು ಮಾಡುವುದೇನು? ಇರಲಿ. ಇನ್ನು ಎರಡು ದಿನ ಬದುಕಿ ನೋಡೋಣ. ಒಬ್ಬಳು ಸತ್ತಳೆಂದು ನಾನೂ ಸತ್ತರೆ, ನಾನು ಸತ್ತನೆಂದು ತಾನೂ ಸಾಯುವ ಪ್ರಾಣಿಯಿನ್ನೊಂದಿರುವುದಿಲ್ಲವೆ? ಅದಕ್ಕೋಸ್ಕರವಾಗಿಯಾದರೂ ಸಾಯದೆ ಇರೋಣ" ಎನ್ನಿಸಿತು.

ಜಗಳವನ್ನು ಬಿಡಿಸುವುದಕ್ಕೆಂದು ಬಂದು, ಇಬ್ಬರನ್ನು ಒಂದೊಂದು ಕೈಯಲ್ಲಿ ಹಿಡಿದು ನಿಂತಿರುವ ಈ ವ್ಯಕ್ತಿಯನ್ನು ಕಂಡು ಅವರಿಬ್ಬರೂ

ಚಕಿತರಾದರು. ಪೋಲೀಸಿನವನಿರಬಹುದೆಂದುಕೊಂಡು, ತಪ್ಪಿಸಿಕೊಂಡು ಹೋಗಲು ದಮ್ಮಯ್ಯ ಗುಡ್ಡೆ ಹಾಕಿದರು. ವ್ಯಕ್ತಿಗೆ ಅದನ್ನು ಕಂಡು ನಗುವು ಬಂದು, "ಭಯ ಪಡಬೇಡಿ, ನಾನು ನಿಮ್ಮನ್ನು ಏನೂ ಮಾಡು ವುದಿಲ್ಲ. ನೀವು ನಾಳೆ ಸಾಹುಕಾರ ಗೋಪಾಲ ಸ್ವಾಮಿಯ ಬಂಗಲೆಗೆ ಹೋಗಿ. ಅಲ್ಲಿ ನಿಮಗೆ ನಿತ್ಯವೂ ಊಟ ಸಿಕ್ಕುವಂತೆ ನಾನು ಏರ್ಪಾಡು ಮಾಡುತ್ತೇನೆ" ಎಂದು ಅವರನ್ನು ಕಳುಹಿಸಿಕೊಟ್ಟನು.

ಮತ್ತೆ ಯೋಚನೆಯು ಬಂದಿತು. ಸಾವೇ ? ಬಾಳೇ ? ಎಂಬ ಗಂಭೀರ ಸಮಸ್ಯೆಯು ಮತ್ತೆ ಮನಸ್ಸಿಗೆ ಬಂದಿತು. ಇನ್ನೂ ಅಷ್ಟು ಯೋಚಿಸಿದನು. ಆ ತಿರುಕರ ಜಗಳವು ನೆನೆಪಾಗಿ, ನಾವೇ ಎಂಬ ಸಿದ್ಧಾಂತವು ಸಡಿಲಿತು. ಮತ್ತೇನಿಲ್ಲದಿದ್ದರೂ ಹೋಗಲಿ. ಹೀಗೆ ಹೊಟ್ಟೆಗಿಲ್ಲದವರ ಹೊಟ್ಟೆಗೆ ಎರಡು ತುತ್ತು ಹಾಕಲೆಂದು, ಅತ್ತವರ ಕಣ್ಣಿನ ನೀರನ್ನು ಅಳಿಸಲೆಂದು, ನನಗೆ ಕೊಟ್ಟಿರುವುದನ್ನು ಇತರರಿಗೆ ಹಂಚಿ ಕೊಂಚವಾದರೂ ಸಂತೋಷಪಡಿಸ ಲೆಂದು ಬದುಕಿರುವೆನು ಎಂದು ನಿರ್ಧರಿಸಿಕೊಂಡನು.

* * * *

ಆ ದಿನ ರಾತ್ರಿ ಸುಮಾರು ಮೂರುಗಂಟೆಯಿರಬಹುದು. ನೀಲಾಂಬ ಕೆಯೂ ಕನಸಿನಲ್ಲಿ ತನ್ನ ಮನೋಭಿಲಾಷೆಯ ಪೂರ್ತಿಯನ್ನು ಕಾಣುತ್ತಿ ದ್ದಳು. ಆಗ ಯಾರೋ ಬಂದು ಆಕೆಯನ್ನು ಎಬ್ಬಿಸಿದರು. ಕಣ್ಣುಬಿಟ್ಟು ನೋಡಿದಳು. ಬಂದಿದ್ದವರು ಗೋಪಾಲಸ್ವಾಮಿ.

ಆಕೆಗೆ ನಂಬಿಕೆಯಾಗಲಿಲ್ಲ. ಕಣ್ಣುಜ್ಜಿಕೊಂಡು "ಇದು ನಿಜವೇ ? ನನ್ನ ದೇವರು ಇಲ್ಲಿಗೆ ದಯಮಾಡಿಸಿದನೇ ?" ಎಂದು ಎದ್ದಳು.

ಸ್ವಾಮಿಯು ಯಥೋಚಿತವಾಗಿ ಸತ್ಕರಿಸಿ "ಬಂದವನು ನಿನ್ನ ದೇವರಲ್ಲ. ನಿನ್ನ ದಾಸ" ಎಂದನು. ಎರಡು ಹೃದಯಗಳು ಸೇರಿದವೆಂದು ತೋರಿಸಲು ಅಂಗಗಳೂ ಒಟ್ಟಾದವು.

---

# PEARLITE

# VANISHING CREAM



*The magic beauty of this Cream is its invisibility to the naked-eye and the Natural tone imparted — to the skin.*

Manufactured by the makers
of the
Famous Mysore Sandal Soap

## GOVT. SOAP FACTORY

BANGALORE

# ಮನೋಹರ ಗ್ರಂಥಮಾಲೆಯ ಪ್ರಕಟನೆಗಳು

ವರ್ಷದಲ್ಲಿ ೧೫೦ ಪುಟಗಳುಳ್ಳ ಆರು ಸರಸ ಗ್ರಂಥಗಳು

ವಾರ್ಷಿಕಚಂದಾ ಅ. ವೆ. ಸೇರಿ ೩--೮--೦ ಮಾತ್ರ

| | | | | |
|---|---|---|---|---|
| ೧ | ಸುದರ್ಶನ (ಕಾದಂಬರಿ) ಆನಂದಕಂದ (ತೀರಿವೆ) | ೦ | ೧೨ | ೦ |
| ೨ | ನವಿಲುಗರಿ (ಸಣ್ಣಕತೆಗಳ ಸಂಗ್ರಹ) ಬೇರೆ ಬೇರೆ ಕತೆಗಾರರು | ೦ | ೧೨ | ೦ |
| ೩ | ತ್ರಿಪುರದಹನ ಎಂ. ಎ. ದೊರೆಸ್ವಾಮಿ ಐಯ್ಯಂಗಾರ ಎಂ. ಎ. ಬಿ. ಎಲ್. | ೦ | ೧೨ | ೦ |
| ೪ | ಬಾಳುರಿ (ಕಾದಂಬರಿ) ಪ್ರೊ. ರಂ. ಶ್ರೀ. ಮುಗಳಿ ಎಂ. ಎ. ಬಿ. ಟಿ. | ೦ | ೧೨ | ೦ |
| ೫ | ಬ್ರಾಹ್ಮಣರ ಹುಡುಗಿ (ಕಾದಂಬರಿ) ಆರ್. ವ್ಯಾಸರಾವ | ೦ | ೧೨ | ೦ |
| ೬ | ವಿಶ್ವಾಮಿತ್ರನ ಸೃಷ್ಟಿ ಭಾಗ ೧ (ಕಾದಂಬರಿ) ಶ್ರೀರಂಗ | ೦ | ೧೨ | ೦ |
| ೭ | ,, ,, ,, ೨ ( ,, ) ,, | ೦ | ೧೨ | ೦ |
| ೮ | ಜೀವನ (ಸಣ್ಣಕತೆಗಳ ಸಂಗ್ರಹ) ಕೃಷ್ಣಕುಮಾರ ಕಾಶ್ಯಪ ಎಂ. ಎ. | ೦ | ೧೨ | ೦ |
| ೯ | ಕಾಳರಾತ್ರಿ (ಆಧ್ಯಾತ್ಮಿಕ ಕಥೆ) ಮಧುರಚೆನ್ನರು | ೦ | ೧೨ | ೦ |
| ೦ | ಧರ್ಮಸೆರೆ (ಕಾದಂಬರಿ) ಜಡಭರತ | ೦ | ೧೪ | ೦ |
| ೧ | ರಾಜಯೋಗಿ (ಐತಿಹಾಸಿಕ ಕಾದಂಬರಿ) ಆನಂದಕಂದ | ೦ | ೧೪ | ೦ |
| ೨ | ಕೋಲ್ಮಿಂಚು (ಏಕಾಂಕನಾಟಕ ಸಂಗ್ರಹ) ಬೇರೆ ಬೇರೆಯವರು | ೧ | ೦ | ೦ |
| ೩ | ಇಜ್ಜೋಡು ಭಾಗ ೧ (ಕಾದಂಬರಿ) ಪ್ರೊ. ವಿ. ಕೃ. ಗೋಕಾಕ ಎಂ. ಎ. | ೦ | ೧೨ | ೦ |
| ೪ | ಇಜ್ಜೋಡು ಭಾಗ ೨ ( ,, ) ,, ,, | ೦ | ೧೨ | ೦ |
| ೫ | ಕುರಿಹಿಂಡು (ವಿಡಂಬನೆಗಳು) ಜಲಧರ | ೧ | ೦ | ೦ |
| ೬ | ಧೂಮಕೇತು (ಕಾದಂಬರಿ) ಕಡೆಂಗೋಡ್ಲು ಶಂಕರಭಟ್ಟ | ೦ | ೧೪ | ೦ |
| ೭ | ಧರ್ಮಜ್ಯೋತಿ ಮ. ಅ. ದೊರೆಸ್ವಾಮಿ ಅಯ್ಯಂಗಾರ ಎಂ. ಎ. ಬಿ. ಎಲ್. | ೧ | ೪ | ೦ |
| ೮ | ಸೇವಾಪ್ರದೀಪ (ಐತಿಹಾಸಿಕ ನಾಟಕ) ಪ್ರೊ. ರಂ. ಶ್ರೀ. ಮುಗಳಿ ಎಂ. ಎ. ಬಿ. ಟಿ. | ೦ | ೧೨ | ೦ |
| ೯ | ದಿಲ್ಲೀಶ್ವರನ ದಿನಚರಿ ನಾ. ಕಸ್ತೂರಿ ಎಂ. ಎ. ಬಿ. ಎಲ್. | ೦ | ೧೨ | ೦ |
| ೦ | ಪುಷ್ಪಮಾಲೆ ಶ್ರೀ. ಸ್ವಾಮಿ ಬೆಂಗಳೂರು | ೦ | ೧೨ | ೦ |
| ೧ | ಸೋಲೋ — ಗೆಲುವೋ ದೇವುಡು | ೦ | ೧೨ | ೦ |
| ೨ | ಮಾನಸಪುತ್ರ (ಅಚ್ಚಿನಲ್ಲಿ) | | | |

— ಬಿಡಿಮುತ್ತು ೩ —

| | | | |
|---|---|---|---|
| ಸಾಹಿತ್ಯ ಮತ್ತು ವಿಮರ್ಶೆ ಶ್ರೀ. ದ. ರಾ. ಬೇಂದ್ರೆ ಎಂ. ಎ. | ೦ | ೧೨ | ೦ |
| ಪಯಣ, ತಿರುಪಾಣಿ (ಅಚ್ಚಿನಲ್ಲಿ) | | | |

ವಿಳಾಸ:—

ಮನೋಹರ ಗ್ರಂಥಮಾಲಾ, ಧಾರವಾಡ